

ಕರ್ನಾಟಕ ಸರ್ಕಾರ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು

Health and Family welfare Servise

# ವಾರ್ಷಿಕ ವರದಿ

೧೯೯೩-೯೪

ಕರ್ನಾಟಕ ಸರ್ಕಾರ

# ವಾರ್ಷಿಕ ವರದಿ

## 1993-94



ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು

# ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು

## ಮುನ್ನೋಟ

ಸಾರ್ವಜನಿಕ ಆರೋಗ್ಯ ಪ್ರಾಮುಖ್ಯತೆಯ ವಿವಿಧ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರುವುದು, ರಾಜ್ಯದ ಜನತೆಗೆ ಆರೋಗ್ಯ ಸೇವೆಗಳನ್ನು ವಿವಿಧ ಮಾದರಿಯ ಆರೋಗ್ಯ ಸಂಸ್ಥೆಗಳ ಮೂಲಕ ಒದಗಿಸುವುದು ಇಲಾಖೆಯ ಉದ್ದೇಶವಾಗಿರುತ್ತದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಆರೋಗ್ಯ ಸೇವೆಗಳನ್ನು ಈ ಕೆಳಕಂಡ ಕಾರ್ಯಕ್ರಮಗಳ ಮೂಲಕ ಒದಗಿಸುತ್ತದೆ.

1. ಕನಿಷ್ಠಾವಶ್ಯಕತೆಗಳ ಯೋಜನೆಯ ಅಂಶವಾದ ಗ್ರಾಮೀಣ ಆರೋಗ್ಯ ಯೋಜನೆ.
2. ವೈದ್ಯಕೀಯ ಅಭಿವೃದ್ಧಿ ಕಾರ್ಯಕ್ರಮ
3. ತಾಯಿ ಮಕ್ಕಳ ಆರೋಗ್ಯ, ಕುಟುಂಬ ಕಲ್ಯಾಣ ಕಾರ್ಯಕ್ರಮ ಮತ್ತು ಲಸಿಕೆ ಕಾರ್ಯಕ್ರಮ.
4. ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ
5. ರಾಷ್ಟ್ರೀಯ ಕ್ಷಯರೋಗ ನಿಯಂತ್ರಣ ಕಾರ್ಯಕ್ರಮ
6. ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮ
7. ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ ಮತ್ತು ರಾಷ್ಟ್ರೀಯ ಫೈಲೇರಿಯಾ ರೋಗ ನಿಯಂತ್ರಣ ಕಾರ್ಯಕ್ರಮ
8. ಸೋಂಕು ರೋಗಗಳಾದ ಅತಿಸಾರ ರೋಗಗಳು, ಕ್ಯಾಸನೂರು ಅರಣ್ಯ ಖಾಯಿಲೆ, ಜಪಾನಿಸ್ ಎನ್‌ಸಫಲೈಟಿಸ್ ನಿಯಂತ್ರಣ ಮತ್ತು ತಡೆಗಟ್ಟುವಿಕೆ
9. ಆರೋಗ್ಯ ಶಿಕ್ಷಣ ಮತ್ತು ತರಬೇತಿ ಕಾರ್ಯಕ್ರಮ
10. ಪೌಷ್ಠಿಕ ಆಹಾರ ಕಾರ್ಯಕ್ರಮ - ಪೌಷ್ಠಿಕ ಆಹಾರದ ಬಗ್ಗೆ ಶಿಕ್ಷಣ ಮತ್ತು ಪ್ರಾತ್ಯಕ್ಷಿಕತೆ
11. ರಾಷ್ಟ್ರೀಯ ಗಳಗಂಡ ನಿಯಂತ್ರಣ ಕಾರ್ಯಕ್ರಮ
12. ಪ್ರಯೋಗಾಲಯ ಸೇವೆಗಳು ಮತ್ತು ಲಸಿಕೆ ತಯಾರಿಕಾ ಘಟಕಗಳು
13. ಶಿಕ್ಷಣ ಮತ್ತು ಪರಿಸರ ನೈರ್ಮಲ್ಯ ಕಾರ್ಯಕ್ರಮ ಮತ್ತು
14. ರೋಗ ಪರಿಹಾರಕ ಸೇವೆಗಳು

## ಆಡಳಿತ ಮತ್ತು ನಿರ್ದೇಶನ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ. ಆಡಳಿತ ಮತ್ತು ಆರ್ಥಿಕ ಜವಾಬ್ದಾರಿಯು ಇಲಾಖೆಯ ನಿರ್ದೇಶಕರದಾಗಿರುತ್ತದೆ. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,

ಇವರು ರಾಜ್ಯದಲ್ಲಿ ವಿವಿಧ ರಾಷ್ಟ್ರೀಯ ಹಾಗೂ ಕುಟುಂಬ ಕಲ್ಯಾಣ ಸೇವೆಗಳನ್ನೊಳಗೊಂಡಂತೆ ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರಲು ಜವಾಬ್ದಾರರಾಗಿರುತ್ತಾರೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರಿಗೆ, ಅಪರ ನಿರ್ದೇಶಕರು (ಕುಟುಂಬ ಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ) (ಅಪರ ನಿರ್ದೇಶಕರು (ಏಯ್ಡ್ಸ್) ಇವರ ಒಂದು ಹುದ್ದೆಯು ಈಗ ಮಂಜೂರಾಗಿರುತ್ತದೆ), ಹದಿನಾಲ್ಕು ಜನ ಸಹ ನಿರ್ದೇಶಕರುಗಳು, ಒಬ್ಬರು ಡೆಮೋಗ್ರಾಫರ್ ಮತ್ತು ಹದಿನಾರು ಜನ ಉಪ ನಿರ್ದೇಶಕರುಗಳು ನೆರವಾಗುತ್ತಾರೆ, ಮತ್ತು ಈ ಅಧಿಕಾರಿಗಳು ತಾಂತ್ರಿಕ ಸಲಹೆಗಾರರಾಗಿ ಕಾರ್ಯ ನಿರ್ವಹಿಸುತ್ತಾರೆ. ಒಬ್ಬರು ಮುಖ್ಯ ಲೆಕ್ಕ ಪತ್ರಾಧಿಕಾರಿ ಹಾಗೂ ಆರ್ಥಿಕ ಸಲಹೆಗಾರರು ಮತ್ತು ಒಬ್ಬರು ಮುಖ್ಯ ಆಡಳಿತಾಧಿಕಾರಿಗಳು ಇದ್ದು, ಇವರುಗಳು ಕ್ರಮವಾಗಿ ಇಲಾಖೆಗೆ ಸಂಬಂಧಿಸಿದ ಹಣಕಾಸು ಮತ್ತು ಲೆಕ್ಕ ಪತ್ರ, ಆಡಳಿತಕ್ಕೆ ಸಂಬಂಧಪಟ್ಟಂತೆ ನಿರ್ದೇಶಕರಿಗೆ ನೆರವಾಗುತ್ತಾರೆ.

ವಿಭಾಗ ಮಟ್ಟದಲ್ಲಿ ನಾಲ್ಕು ಮಂದಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ವಿಭಾಗೀಯ ಸಹ ನಿರ್ದೇಶಕರುಗಳಿದ್ದು, ಇವರು ಬೆಂಗಳೂರು, ಬೆಳಗಾವಿ, ಗುಲ್ಬರ್ಗಾ ಮತ್ತು ಮೈಸೂರಿನಲ್ಲಿ ವಿಭಾಗೀಯ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರುಗಳಿಗೆ ಸಹಾಯಕರುಗಳಾಗಿ ತಲಾ ಇಬ್ಬರಂತೆ ಉಪ ನಿರ್ದೇಶಕರುಗಳು ಇರುತ್ತಾರೆ.

ವಿಭಾಗೀಯ ಸಹ ನಿರ್ದೇಶಕರುಗಳು ಅವರವರ ಅಧಿಕಾರ ವ್ಯಾಪ್ತಿಯೊಳಗೆ ಬರುವ ಜಿಲ್ಲೆಗಳಲ್ಲಿ ಪರ್ಯಾನ್ವೇಷಣೆ ನಡೆಸುವುದು ಮತ್ತು ಕುಟುಂಬ ಕಲ್ಯಾಣ ಸೇವೆಗಳು ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನೊಳಗೊಂಡಂತೆ ವಿವಿಧ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಕಾರ್ಯಾಚರಣೆಗೆ ತರುವುದಕ್ಕೆ ಜವಾಬ್ದಾರರಾಗಿರುತ್ತಾರೆ.

ಜಿಲ್ಲಾ ಮಟ್ಟದಲ್ಲಿ 20 ಮಂದಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಇರುತ್ತಾರೆ. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ನೆರವಿಗೆ ಜಿಲ್ಲಾ ಕುಷ್ಠರೋಗಾಧಿಕಾರಿಗಳು, ಜಿಲ್ಲಾ ತಾಯಿ ಮತ್ತು ಮಕ್ಕಳ ಆರೋಗ್ಯ ಅಧಿಕಾರಿಗಳು (ಹಿಂದಿನ ಜಿಲ್ಲಾ ಲಸಿಕೆ ಅಧಿಕಾರಿಗಳು), ಜಿಲ್ಲಾ ಮಲೇರಿಯಾಧಿಕಾರಿಗಳು, ಜಿಲ್ಲಾ ಕ್ಷಯರೋಗಾಧಿಕಾರಿಗಳು, ಜಿಲ್ಲಾ ಪ್ರಯೋಗ ಶಾಲೆಗಳಲ್ಲಿನ ಅಧಿಕಾರಿಗಳು, ವೈದ್ಯಾಧಿಕಾರಿಗಳು (ಕುಟುಂಬ ಕಲ್ಯಾಣ ಮತ್ತು ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳು) ಮತ್ತು ಪ್ರಾದೇಶಿಕ ಸಹಾಯಕ ರಾಸಾಯನಿಕ ವಿಶ್ಲೇಷಕರುಗಳು ಇರುತ್ತಾರೆ. ಇವರುಗಳು ಕುಟುಂಬ ಕಲ್ಯಾಣ ಸೇವೆಗಳು ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನೊಳಗೊಂಡಂತೆ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರರಾಗಿರುತ್ತಾರೆ.

ಜಿಲ್ಲಾ ಮಟ್ಟದಲ್ಲಿರುವ ಜಿಲ್ಲಾ ಆಸ್ಪತ್ರೆಗಳ ಜಿಲ್ಲಾ ಶಸ್ತ್ರ ಚಿಕಿತ್ಸಕರುಗಳು ರೋಗ ಪರಿಹಾರಕ ಸೇವೆಗಳನ್ನು ಒದಗಿಸುವುದಕ್ಕೆ ಜವಾಬ್ದಾರರಾಗಿರುತ್ತಾರೆ. ಜಿಲ್ಲಾ ಆಸ್ಪತ್ರೆಗಳು ಪರಾಮರ್ಶಕ ಆಸ್ಪತ್ರೆಗಳಾಗಿಯೂ ಕಾರ್ಯನಿರ್ವಹಿಸುತ್ತಿವೆ.

ಉಪ ವಿಭಾಗ ಮಟ್ಟದಲ್ಲಿ 49 ಸಹಾಯಕ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಕುಟುಂಬ ಕಲ್ಯಾಣ ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನು ಒಳಗೊಂಡಂತೆ ವಿವಿಧ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರರಾಗಿರುತ್ತಾರೆ.

ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮಟ್ಟದಲ್ಲಿ ವೈದ್ಯಾಧಿಕಾರಿಗಳು ಕುಟುಂಬ ಕಲ್ಯಾಣ ಹಾಗೂ ಪ್ರಸೂತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳನ್ನೊಳಗೊಂಡಂತೆ ರಾಷ್ಟ್ರೀಯ ಮತ್ತು ರಾಜ್ಯದ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರರಾಗಿರುತ್ತಾರೆ.

## 1993-94ನೇ ಸಾಲಿನ ಸಾಧನೆಗಳು

1993-94 ನೇ ಸಾಲಿಗೆ ಸರ್ಕಾರವು ಈ ಕೆಳಕಂಡ ಯೋಜನೆಗಳಿಗೆ ಮಂಜೂರಾತಿ ನೀಡಿದೆ:-

1. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಶಿವಮೊಗ್ಗ ಜಿಲ್ಲೆಯ ಭದ್ರಾವತಿ ಮತ್ತು ಮೈಸೂರು ಜಿಲ್ಲೆಯ ನಂಜನಗೂಡು ಸಮುದಾಯ ಆರೋಗ್ಯ ಕೇಂದ್ರಗಳಿಗೆ ಟ್ರಾಮಾ ಕೇರ್ ಯೂನಿಟ್.
2. ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕು, ಬಾಗೇವಾಳು ಮತ್ತು ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕು, ಕಲ್ಲೂರು. ಸಿರಾ ತಾಲ್ಲೂಕು, ಕಳ್ಳಂಬೆಳ್ಳ, ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಪ್ರಸೂತಿ ಗೃಹಗಳು.
3. ನೆಲಮಂಗಲ ಮತ್ತು ಕುಮಟಾದಲ್ಲಿ ಒಂದೊಂದು ಸುಧಾರಿತ ಕುಷ್ಠರೋಗ ನಿಯಂತ್ರಣ ಘಟಕ.
4. ಶಿವಮೊಗ್ಗ, ಜಮಖಂಡಿ ಮತ್ತು ಬೆಳಗಾಂ ಜಿಲ್ಲೆಯ ನಿಪ್ಪಾಣಿ ಟೌನ್‌ಗಳಲ್ಲಿ ನಗರ ಕುಷ್ಠರೋಗ ಕೇಂದ್ರಗಳು.
5. ಮೈಸೂರು ಜಿಲ್ಲೆಯ ಚಾಮರಾಜನಗರದ ಸಾರ್ವಜನಿಕ ಆಸ್ಪತ್ರೆಯಲ್ಲಿ ರಕ್ತನಿಧಿ ಸ್ಥಾಪನೆ.
6. ಇಲ್‌ಕಲ್‌ನಲ್ಲಿ ಆನೇಕಾಲು ನಿಯಂತ್ರಣ ಘಟಕ
7. ಬಿಜಾಪುರ ಜಿಲ್ಲೆಯ ಕಮಟಗಿಯಲ್ಲಿ ಆನೇಕಾಲು ಚಿಕಿತ್ಸಾಲಯ.
8. ಕುಷ್ಠರೋಗ ಹಾಸಿಗೆಗಳು - 100 (ಸ್ವಯಂಸೇವಾ ಸಂಸ್ಥೆಗಳು)

9. ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ಎಂ.ಜಿ.ಎಂ. ಸಾರ್ವಜನಿಕ ಆಸ್ಪತ್ರೆಯ ಹಾಸಿಗೆಗಳ ಸಂಖ್ಯೆಯನ್ನು 64 ರಿಂದ 100 ಕ್ಕೆ ಹೆಚ್ಚಿಸಲು ಆಡಳಿತಾತ್ಮಕ ಮಂಜೂರಾತಿ.

10. ಕೋಲಾರ ಜಿಲ್ಲೆಯ ಚಿಂತಾಮಣಿಯ ಸಾರ್ವಜನಿಕ ಆಸ್ಪತ್ರೆಯ ಹಾಸಿಗೆಗಳ ಸಂಖ್ಯೆಯನ್ನು 50 ರಿಂದ 150 ಕ್ಕೆ ಹೆಚ್ಚಿಸಲು ಮಂಜೂರಾತಿ

11. ಅರವತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳು

12. ಹದಿನೈದು ಸಮುದಾಯ ಆರೋಗ್ಯ ಕೇಂದ್ರಗಳು

13. ಚಿತ್ರದುರ್ಗ ಜಿಲ್ಲೆಯ ಹಿರಿಯೂರು ಸಾರ್ವಜನಿಕ ಆಸ್ಪತ್ರೆಯಲ್ಲಿ ಹಾಲಿ ಇರುವ 50 ಹಾಸಿಗೆಗಳನ್ನು 100 ಹಾಸಿಗೆಗಳಿಗೆ ಹೆಚ್ಚಿಸುವ ಬಗ್ಗೆ

14. ತುಮಕೂರು ಜಿಲ್ಲೆಯ ತಿಪಟೂರಿನ ಸಾರ್ವಜನಿಕ ಆಸ್ಪತ್ರೆಯಲ್ಲಿ ಹಾಲಿ ಇರುವ 30 ಹಾಸಿಗಳನ್ನು 100 ಹಾಸಿಗೆಗಳಿಗೆ ಹೆಚ್ಚಿಸುವ ಬಗ್ಗೆ

15. ಹಾಸನ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಡಯಾಬಿಟಿಸ್ ನಿಯಂತ್ರಣ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಬಗ್ಗೆ.

16. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯಕ್ಕೆ ಹೊಂದಿಕೊಂಡಂತೆ ಆಯೋಡಿನ್ ಕೊರತೆಯಿಂದ ಉಂಟಾಗುವ ನ್ಯೂನತೆಗಳ ಉಸ್ತುವಾರಿ ಪ್ರಯೋಗಾಲಯ ಸ್ಥಾಪನೆ ಬಗ್ಗೆ.

17. 200 ಉಪಕೇಂದ್ರಗಳ ಸ್ಥಾಪನೆ ಬಗ್ಗೆ.

18. ಶಿವಮೊಗ್ಗೆಯ ಮೆಗ್ಗಾನ್ ಆಸ್ಪತ್ರೆಯಲ್ಲಿ ತೀವ್ರ ಹೃದ್ರೋಗ ಚಿಕಿತ್ಸಾ ಕೇಂದ್ರವನ್ನು ಸ್ಥಾಪಿಸುವ ಬಗ್ಗೆ.

19. ಮಡಿಕೇರಿ ಜಿಲ್ಲಾ ಆಸ್ಪತ್ರೆಗೆ ಹೆಚ್ಚುವರಿ ಸಿಬ್ಬಂದಿ ಮಂಜೂರಾತಿ ಬಗ್ಗೆ

20. ಜಿಲ್ಲಾ ಆಸ್ಪತ್ರೆ, ತುಮಕೂರು ಇಲ್ಲಿಗೆ ಹೊಸ ಹೊರರೋಗಿಗಳ ವಿಭಾಗ ಸ್ಥಾಪನೆ ಮತ್ತು ಹೊರರೋಗಿಗಳ ವಿಭಾಗಕ್ಕೆ ಹೆಚ್ಚುವರಿ ಸಿಬ್ಬಂದಿ ಮಂಜೂರಾತಿ ಬಗ್ಗೆ.

21. ಕಾರವಾರ ಜಿಲ್ಲಾ ಆಸ್ಪತ್ರೆಯಲ್ಲಿ 130 ಹೆಚ್ಚಿನ ಹಾಸಿಗೆಗಳನ್ನು ಸ್ಥಾಪಿಸಲು ಹೆಚ್ಚುವರಿ ಸಿಬ್ಬಂದಿ ಮಂಜೂರಾತಿ ಬಗ್ಗೆ.

22. ಶ್ರೀ ನರಸಿಂಹರಾಜ ಆಸ್ಪತ್ರೆ, ಕೋಲಾರ ಇಲ್ಲಿಗೆ ಹೆಚ್ಚಿನ ಸಿಬ್ಬಂದಿ ಮಂಜೂರಾತಿ ಬಗ್ಗೆ.

23. ಜಿಲ್ಲಾ ಆಸ್ಪತ್ರೆ, ಬೀದರ್‌ನಲ್ಲಿ ತೀವ್ರ ಹೃದ್ರೋಗ ಚಿಕಿತ್ಸಾ ಘಟಕ ಸ್ಥಾಪನೆ ಬಗ್ಗೆ.

24. ಉಡುಪಿಯ ಸಾರ್ವಜನಿಕ ಆಸ್ಪತ್ರೆ ಮತ್ತು ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆ, ಉಡುಪಿ ಇಲ್ಲಿಗೆ ಹೆಚ್ಚುವರಿ ಸಿಬ್ಬಂದಿ ಮಂಜೂರಾತಿ ಬಗ್ಗೆ.

25. ಚಿತ್ರದುರ್ಗ ಜಿಲ್ಲಾ ಆಸ್ಪತ್ರೆಯಲ್ಲಿರುವ 56 ಹಾಸಿಗೆಗಳ ಮಕ್ಕಳ ವಿಭಾಗಕ್ಕೆ ಹೆಚ್ಚುವರಿ ಸಿಬ್ಬಂದಿ ಮಂಜೂರಾತಿ ಬಗ್ಗೆ.

26. ಮಂಡ್ಯ ಜಿಲ್ಲಾ ಆಸ್ಪತ್ರೆಯಲ್ಲಿ ತೀವ್ರ ಹೃದ್ರೋಗ ಚಿಕಿತ್ಸಾ ಘಟಕ ಸ್ಥಾಪನೆ ಬಗ್ಗೆ.

27. ಮೈಸೂರಿನ ಸಾಂಕ್ರಾಮಿಕ ರೋಗಗಳ ಆಸ್ಪತ್ರೆಗೆ ಹೆಚ್ಚುವರಿ ಸಿಬ್ಬಂದಿ ಮಂಜೂರಾತಿ ಬಗ್ಗೆ.

28. ಸಾರ್ವಜನಿಕ ಆಸ್ಪತ್ರೆ, ವಿರಾಜಪೇಟೆ ಮತ್ತು ಸೋಮವಾರಪೇಟೆ ಹಾಗೂ ಬೆಂಗಳೂರಿನ ಮಾಗಡಿ ರಸ್ತೆಯಲ್ಲಿರುವ ಕೇಂದ್ರ ಕಾರ್ಯಾಗಾರದ ಆವರಣದಲ್ಲಿ ಹೊಸದಾಗಿ ಪ್ರಾರಂಭಿಸಲು ಉದ್ದೇಶಿಸಿರುವ ಆಸ್ಪತ್ರೆಗೆ ನೀರಿನ ಸೌಕರ್ಯ ಕಲ್ಪಿಸುವ ಬಗ್ಗೆ.

## ವೈದ್ಯಕೀಯ ರಕ್ಷಣೆ (ನಗರ)

ಜಿಲ್ಲಾ ಆಸ್ಪತ್ರೆಗಳು ರೋಗಿಗಳ ಚಿಕಿತ್ಸಾ ಸೇವೆಯನ್ನೇ ಅಲ್ಲದೆ ರೋಗ ನಿರೋಧಕ ಹಾಗೂ ಆರೋಗ್ಯ ಉತ್ತೇಜಕ ಕಾರ್ಯಕ್ರಮವನ್ನು ಇತರ ಪ್ರಮುಖ ಆಸ್ಪತ್ರೆಗಳು, ಬೋಧಕ ಆಸ್ಪತ್ರೆಗಳು ಮತ್ತು ಸಾಂಕ್ರಾಮಿಕ ರೋಗಗಳ ಆಸ್ಪತ್ರೆಗಳು ಮುಂತಾದ ವಿವಿಧ ಬಗೆಯ ಕೆಳಕಂಡ ಆಸ್ಪತ್ರೆಗಳ ಮೂಲಕ ಒದಗಿಸುತ್ತಿದೆ.

| | | ಸಂಸ್ಥೆಗಳ ಸಂಖ್ಯೆ | ಹಾಸಿಗೆಗಳ ಸಂಖ್ಯೆ |
|---|---|---|---|
| 1. | ಜಿಲ್ಲಾ ಆಸ್ಪತ್ರೆಗಳು | 16 | 5788 |
| 2. | ಬೋಧಕ ಆಸ್ಪತ್ರೆಗಳು | 9 | 5907 |
| 3. | ದೊಡ್ಡ ಆಸ್ಪತ್ರೆಗಳು | 8 | 1521 |
| 4. | ವಿಶೇಷ ಆಸ್ಪತ್ರೆಗಳು | 16 | 3330 |
| 5. | ಸಾರ್ವಜನಿಕ ಆಸ್ಪತ್ರೆಗಳು / ಹೆರಿಗೆ ಆಸ್ಪತ್ರೆಗಳು | 127 | 6361 |
| | ಒಟ್ಟು | 176 | 22907 |

ಪ್ರತಿ ಜಿಲ್ಲಾ ಆಸ್ಪತ್ರೆಯು ಕೆಳಕಂಡ ವಿಶೇಷ ಚಿಕಿತ್ಸಾ ಸೇವಾ ಸೌಲಭ್ಯಗಳನ್ನು ಹೊಂದಿರುತ್ತವೆ.

1. ಕಾಯ ಚಿಕಿತ್ಸೆ
2. ಶಸ್ತ್ರ ಚಿಕಿತ್ಸೆ
3. ಪ್ರಸೂತಿ ಮತ್ತು ಸ್ತ್ರೀರೋಗ ಚಿಕಿತ್ಸೆ
4. ಮಕ್ಕಳ ಚಿಕಿತ್ಸೆ
5. ಅಸ್ಥಿಚಿಕಿತ್ಸೆ
6. ನೇತ್ರ ಚಿಕಿತ್ಸೆ
7. ಕಿವಿ, ಮೂಗು ಮತ್ತು ಗಂಟಲು ಚಿಕಿತ್ಸೆ
8. ಚರ್ಮ ಮತ್ತು ಗುಹ್ಯ ರೋಗಗಳ ಚಿಕಿತ್ಸೆ

9. ರೋಗ ನಿಧಾನ ಶಾಸ್ತ ಮತ್ತು ಮತ್ತು ಏಕಾಣು ಜೀವಿ ಶಾಸ್ತ್ರ

10 ಕ್ಷ-ಕಿರಣ

11. ಅರಿವಳಿಕೆ

12. ದಂತ ಸೇವೆಗಳು

ಜಿಲ್ಲಾ ಆಸ್ಪತ್ರೆಗಳಲ್ಲಿ ಇರುವ ವಿಶೇಷ ತಜ್ಞರ ಸೇವಾ ವಿಭಾಗಗಳು ಆಸ್ಪತ್ರೆಗಳಿಗೆ ನೇರವಾಗಿ ಬರುವ ಹಾಗೂ ಗ್ರಾಮಾಂತರ ಪ್ರದೇಶದ ಆರೋಗ್ಯ ಸಂಸ್ಥೆಗಳಿಂದ ಮತ್ತು ಹಳ್ಳಿಗಾಡಿನ ಆರೋಗ್ಯ ಸಂಸ್ಥೆಗಳಿಂದ ಬರುವಂತಹ ರೋಗಿಗಳಿಗೂ ಸೇವಾ ಸೌಲಭ್ಯಗಳನ್ನು ಒದಗಿಸುತ್ತವೆ. ಜಿಲ್ಲಾ ಆಸ್ಪತ್ರೆಗಳು ಕೆಳಹಂತದ ಆರೋಗ್ಯ ಸಂಸ್ಥೆಗಳಿಗೆ ಪರಾಮರ್ಶಕ ಆಸ್ಪತ್ರೆಗಳಾಗಿ ಕಾರ್ಯನಿರ್ವಹಿಸುತ್ತಿವೆ.

ಎಸ್. ಸಿ.ಆಸ್ಪತ್ರೆ, ಹಾಸನ, ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ, ಎಸ್.ಎನ್. ಆರ್. ಅಸ್ಪತ್ರೆ, ಕೋಲಾರ ಮತ್ತು ಜಿಲ್ಲಾ ಆಸ್ಪತ್ರೆ ವಿಜಾಪುರ ಇವುಗಳಲ್ಲಿ ಸುಟ್ಟಗಾಯ ಮತ್ತು ಆಕಸ್ಮಿಕ ವಿಭಾಗಗಳನ್ನು ಸ್ಥಾಪಿಸಲಾಗಿದೆ.

ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ಮತ್ತು ಉಡುಪಿ, ಕೆ.ಜಿ.ಎಫ್ ಮತ್ತು ಕೊಳ್ಳೇಗಾಲದಲ್ಲಿರುವ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಗುಹ್ಯರೋಗ ಚಿಕಿತ್ಸಾಲಯಗಳು ಕಾರ್ಯನಿರ್ವಹಿಸುತ್ತಿವೆ.

ಶಿವಮೊಗ್ಗ, ಹಾಸನ, ಬೀದರ್, ಕಾರವಾರ, ಬಿಜಾಪುರ ಮತ್ತು ಚಿತ್ರದುರ್ಗಗಳಲ್ಲಿರುವ ಜಿಲ್ಲಾ ಆಸ್ಪತ್ರೆಗಳಲ್ಲಿ ಮತ್ತು ಬೆಂಗಳೂರಿನಲ್ಲಿರುವ ಕೆ.ಸಿ. ಸಾರ್ವಜನಿಕ ಆಸ್ಪತ್ರೆಯಲ್ಲಿ ಮಾನಸಿಕ ರೋಗ ಚಿಕಿತ್ಸಾಲಯಗಳು ಕಾರ್ಯನಿರ್ವಹಿಸುತ್ತಿವೆ

ಶಿವಮೊಗ್ಗ, ಹಾಸನ, ತುಮಕೂರು, ಚಿತ್ರದುರ್ಗ, ಕೋಲಾರ, ಮಂಡ್ಯ ಮತ್ತು ಬಿಜಾಪುರಗಳಲ್ಲಿರುವ ಜಿಲ್ಲಾ ಆಸ್ಪತ್ರೆಗಳಲ್ಲಿ ಪ್ರಾಕೃತಿಕ ಚಿಕಿತ್ಸಾ ಘಟಕಗಳು ಕಾರ್ಯ ನಿರ್ವಹಿಸುತ್ತಿರುತ್ತವೆ. ಎಲ್ಲಾ ಬೋಧಕ ಆಸ್ಪತ್ರೆಗಳಲ್ಲಿಯೂ ಪ್ರಾಕೃತಿಕ ಚಿಕಿತ್ಸಾ ಘಟಕಗಳು ಕಾರ್ಯ ನಿರ್ವಹಿಸುತ್ತಿರುತ್ತವೆ. ಬೆಂಗಳೂರಿನಲ್ಲಿರುವ ಕೆ.ಸಿ. ಸಾರ್ವಜನಿಕ ಆಸ್ಪತ್ರೆಯಲ್ಲಿ ಮತ್ತು ಜಯನಗರ ಸಾರ್ವಜನಿಕ ಆಸ್ಪತ್ರೆಯಲ್ಲಿಯೂ ಕೂಡ ಪ್ರಾಕೃತಿಕ ಚಿಕಿತ್ಸಾ ಘಟಕವು ಕಾರ್ಯ ನಿರ್ವಹಿಸುತ್ತಿದೆ.

ತುರ್ತು ಮತ್ತು ಆಕಸ್ಮಿಕ ವಿಭಾಗಗಳು ದಿನವಿಡೀ ಕಾರ್ಯನಿರ್ವಹಿಸುತ್ತಿರುತ್ತವೆ.

ಆರ್ಥಿಕ ಸಂಪನ್ಮೂಲಕ್ಕೆ ಅನುಗುಣವಾಗಿ ರಾಜ್ಯದ ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ಮತ್ತು ದೊಡ್ಡ ಅಸ್ಪತ್ರೆಗಳಲ್ಲಿರುವ ರಕ್ತನಿಧಿ ಕೇಂದ್ರಗಳನ್ನು ಬಲಪಡಿಸಲಾಗುತ್ತದೆ.

ರೇಡಿಯಾಲಜಿ ಸೇವೆಯು ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ, ದೊಡ್ಡ ಆಸ್ಪತ್ರೆಗಳಲ್ಲಿ ಮತ್ತು ಕೆಲವು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಲಭ್ಯವಿರುತ್ತದೆ. ದಂತ ಚಿಕಿತ್ಸಾ ವಿಭಾಗವನ್ನು

ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ, ದೊಡ್ಡ ಆಸ್ಪತ್ರೆಗಳಲ್ಲಿ ಮತ್ತು ಕೆಲವು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಸ್ಥಾಪಿಸಲಾಗಿದೆ.

ಬೆಂಗಳೂರು, ಮೈಸೂರು ಮತ್ತು ಕೆ.ಜಿ.ಎಫ್.ನಲ್ಲಿರುವ ಸಾಂಕ್ರಾಮಿಕ ರೋಗಗಳ ಆಸ್ಪತ್ರೆಗಳು ವಿಶೇಷ ರೀತಿಯ ಆಸ್ಪತ್ರೆಗಳಾಗಿದ್ದು, ಇವುಗಳು ಕಾಲರಾ, ಕರುಳುಬೇನೆ, ಗಂಟಲುಮಾರಿ, ಧನುರ್ವಾಯು, ನಾಯಿಕೆಮ್ಮು, ಹುಚ್ಚುನಾಯಿ ಕಡಿತ, ದಢಾರ, ಸಂಶಯಾಸ್ಪದ ಸೀತಾಳ ಸಿಡುಬುರೋಗ ಮತ್ತು ಇತರೇ ಅಂಟು ಜಾಡ್ಯಗಳಂತಹ ಸಾಂಕ್ರಾಮಿಕ ರೋಗಗಳಿಗೆ ಚಿಕಿತ್ಸೆ ನೀಡುತ್ತವೆ.

## ಗ್ರಾಮೀಣ ಆರೋಗ್ಯ ಕಾರ್ಯಕ್ರಮಗಳು

ಕನಿಷ್ಠಾವಶ್ಯಕತೆ ಕಾರ್ಯಕ್ರಮ (ಗ್ರಾಮೀಣ ಆರೋಗ್ಯ) ಅನುಷ್ಠಾನದ ಅಡಿಯಲ್ಲಿ ಭಾರತ ಸರ್ಕಾರದ ಮಾರ್ಗದರ್ಶನಗಳಿಗನುಗುಣವಾಗಿ ರಾಜ್ಯ ಸರ್ಕಾರವು ಮೂರು ಹಂತಗಳ ಅಂದರೆ ಉಪಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಸಮುದಾಯ ಆರೋಗ್ಯ ಕೇಂದ್ರ ಎಂಬ ಆರೋಗ್ಯ ಸಂಸ್ಥೆಗಳನ್ನು ಸ್ಥಾಪಿಸಲು ತೀರ್ಮಾನಿಸಿದೆ.

ಹಾಲಿ ಕಾರ್ಯ ನಿರ್ವಹಿಸುತ್ತಿರುವ ಪ್ರಾಥಮಿಕ ಆರೋಗ್ಯ ಘಟಕಗಳನ್ನು ಹಂತಹಂತವಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸಲಾಗುತ್ತಿದೆ.

### 1. ಸಮುದಾಯ ಆರೋಗ್ಯ ಕೇಂದ್ರ

ಪ್ರತಿನಾಲ್ಕು ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ : ಒಂದು ಲಕ್ಷ ಜನ ಸಂಖ್ಯೆಗೆ ಒಂದು ಸಮುದಾಯ ಆರೋಗ್ಯ ಕೇಂದ್ರವನ್ನು ಸ್ಥಾಪಿಸುವುದು ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರದ ಉದ್ದೇಶವಾಗಿರುತ್ತದೆ. ರಾಜ್ಯದ ಎಲ್ಲಾ ತಾಲ್ಲೂಕು ಮಟ್ಟದ ಆರೋಗ್ಯ ಸಂಸ್ಥೆಗಳನ್ನು 30 ಹಾಸಿಗೆಗಳ ಆಸ್ಪತ್ರೆಗಳಾನ್ನಾಗಿ ಮತ್ತು ಉಪವಿಭಾಗ ಕೇಂದ್ರ ಸ್ಥಾನದ ತಾಲ್ಲೂಕುಗಳ ಸಂಸ್ಥೆಗಳನ್ನು 50 ಹಾಸಿಗೆಗಳ ಆಸ್ಪತ್ರೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಸರ್ಕಾರದ ಕಾರ್ಯನೀತಿಯಾಗಿರುತ್ತದೆ. ಈ ಸಂಸ್ಥೆಗಳು ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನತೆಗೆ ಪರಾಮರ್ಶಕ ಆಸ್ಪತ್ರೆಗಳಾಗಿ ಕಾರ್ಯನಿರ್ವಹಿಸುತ್ತವೆ.

30 ಹಾಸಿಗೆಗಳ ಆಸ್ಪತ್ರೆಗಳು ಕೆಳಕಂಡ ಕನಿಷ್ಠ ನಾಲ್ಕು ವಿಶೇಷ ಚಿಕಿತ್ಸಾ ಸೇವಾ ಸೌಲಭ್ಯಗಳನ್ನು ಹೊಂದಿರುತ್ತವೆ.

1. ಸಾಮಾನ್ಯ ವೈದ್ಯ ಚಿಕಿತ್ಸೆ
2. ಸಾಮಾನ್ಯ ಶಸ್ತ್ರಚಿಕಿತ್ಸೆ
3. ಪ್ರಸೂತಿ ಮತ್ತು ಸ್ತ್ರೀರೋಗ ಚಿಕಿತ್ಸೆ
4. ದಂತ ಶಸ್ತ್ರಚಿಕಿತ್ಸೆ

50 ಹಾಸಿಗೆಯುಳ್ಳ ಆಸ್ಪತ್ರೆಗಳಲ್ಲಿ ಮೇಲ್ಕಂಡ ನಾಲ್ಕು ವಿಶೇಷ ಚಿಕಿತ್ಸಾ ಸೇವಾ ಸೌಲಭ್ಯಗಳ ಜೊತೆಗೆ ಕಿವಿ, ಮೂಗು, ಗಂಟಲು ಚಿಕಿತ್ಸೆ ಮತ್ತು ಮಕ್ಕಳ ಚಿಕಿತ್ಸಾ ಸೇವಾ ಸೌಲಭ್ಯಗಳಿರುತ್ತವೆ.

## 2. ಪ್ರಾಥಮಿಕ ಆರೋಗ್ಯ ಕೇಂದ್ರ

ಪ್ರಾಥಮಿಕ ಆರೋಗ್ಯ ಕೇಂದ್ರಗಳು ರೋಗ ನಿರೋಧಕ, ಮುಂಜಾಗರೂಕತೆ ಮತ್ತು ಆರೋಗ್ಯ ಉತ್ತೇಜಕ ಸೇವೆಗಳನ್ನು ಒದಗಿಸುತ್ತವೆ. ಇವುಗಳಲ್ಲದೆ ರಾಷ್ಟ್ರೀಯ ಮತ್ತು ರಾಜ್ಯದ ಆರೋಗ್ಯ ಕಾರ್ಯಕ್ರಮಗಳನ್ನು ಕೂಡ ಒದಗಿಸುತ್ತವೆ.

ಭಾರತ ಸರ್ಕಾರದ ಮಾರ್ಗಸೂಚಿಗನುಗುಣವಾಗಿ ಕ್ರಿ.ಶ. ಎರಡು ಸಾವಿರದ ವೇಳೆಗೆ ಕರ್ನಾಟಕದಲ್ಲಿ ಮೈದಾನ ಪ್ರದೇಶಗಳಲ್ಲಿ ಪ್ರತಿ ಮೂವತ್ತು ಸಾವಿರ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯಕೇಂದ್ರ ಮತ್ತು ಗುಡ್ಡಗಾಡು ಮತ್ತು ಬುಡಕಟ್ಟು ಜನಾಂಗದವರು ವಾಸಿಸುವ ಪ್ರದೇಶಗಳಲ್ಲಿ ಪ್ರತಿ ಇಪ್ಪತ್ತು ಸಾವಿರ ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ ಇರುತ್ತದೆ. ಇದರಿಂದ ಗ್ರಾಮೀಣ ಪ್ರದೇಶದ ಜನರಿಗೆ ಅವರ ಗ್ರಾಮಗಳ ಸಮೀಪದಲ್ಲಿ ಆರೋಗ್ಯ ಸೇವೆಗಳನ್ನು ಒದಗಿಸಲು ಅನುಕೂಲವಾಗುತ್ತದೆ. ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೂ 50,000 ರೂ. ಬೆಲೆ ಬಾಳುವ ಔಷಧಗಳನ್ನು ಒದಗಿಸಲಾಗುತ್ತದೆ.

## 3. ಪ್ರಾಥಮಿಕ ಆರೋಗ್ಯ ಘಟಕ

ಕರ್ನಾಟಕ ರಾಜ್ಯದಲ್ಲಿ ಪ್ರಾಥಮಿಕ ಆರೋಗ್ಯ ಘಟಕಗಳೆಂಬ ಆರೋಗ್ಯ ಸಂಸ್ಥೆಗಳಿದ್ದು, ಈ ಘಟಕಗಳು ರೋಗ ಮುಂಜಾಗರೂಕತೆ, ರೋಗ ನಿರೋಧಕ ಮತ್ತು ಆರೋಗ್ಯ ಉತ್ತೇಜಕ ಸೇವೆಗಳನ್ನು ಒದಗಿಸುತ್ತವೆ. ಈ ಸಂಸ್ಥೆಗಳನ್ನು ಹಂತ ಹಂತವಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸಲಾಗುತ್ತದೆ ಮತ್ತು ಕನಿಷ್ಠ ಅವಶ್ಯಕತೆಗಳನ್ನು ಒದಗಿಸಲಾಗುತ್ತದೆ.

## 4. ಆರೋಗ್ಯ ಉಪಕೇಂದ್ರಗಳು

ಮೈದಾನ ಪ್ರದೇಶಗಳಲ್ಲಿ ಪ್ರತಿ ಐದು ಸಾವಿರ ಜನಸಂಖ್ಯೆಗೆ ಒಂದು ಆರೋಗ್ಯ ಉಪಕೇಂದ್ರ ಮತ್ತು ಗುಡ್ಡಗಾಡು ಮತ್ತು ಬುಡಕಟ್ಟು ಜನಾಂಗ ವಾಸಿಸುವ ಪ್ರದೇಶದಲ್ಲಿ ಪ್ರತಿ ಮೂರು ಸಾವಿರ ಜನಸಂಖ್ಯೆಗೆ ಒಂದು ಆರೋಗ್ಯ ಉಪಕೇಂದ್ರವನ್ನು ಹೊಂದುವ ಗುರಿಯು ರಾಜ್ಯ ಮತ್ತು ಭಾರತ ಸರ್ಕಾರದ ಉದ್ದೇಶವಾಗಿರುತ್ತದೆ. ಪ್ರತಿ ಆರೋಗ್ಯ ಉಪಕೇಂದ್ರಗಳಲ್ಲಿ ಒಬ್ಬ ಮಹಿಳಾ ಆರೋಗ್ಯ ಸಹಾಯಕಿ ಮತ್ತು ಒಬ್ಬ ಪುರುಷ ಆರೋಗ್ಯ ಸಹಾಯಕರುಗಳು ಕಾರ್ಯನಿರ್ವಹಿಸುತ್ತಿರುತ್ತಾರೆ. ಮತ್ತು ಪ್ರತಿ ಉಪಕೇಂದ್ರಕ್ಕೂ ಐದು ಸಾವಿರ ರೂಪಾಯಿಗಳ ಬೆಲೆ ಬಾಳುವ ಔಷಧಗಳನ್ನು ಒದಗಿಸಲಾಗುತ್ತದೆ.

ಗ್ರಾಮೀಣ ಆರೋಗ್ಯ ಸೇವೆಗಳನ್ನು ವಿವಿಧ ಮಾದರಿಯ ಸಂಸ್ಥೆಗಳ ಮೂಲಕ ಒದಗಿಸಲಾಗುತ್ತದೆ. ವಿವರಗಳು ಕೆಳಕಂಡಂತಿರುತ್ತವೆ.

| ಕ್ರಸಂ | ಸಂಸ್ಥೆಯ ವಿವರಗಳು | 1991-92 | 1992-93 | 1993-94 |
|---|---|---|---|---|
| 1. | ಸಮುದಾಯ ಆರೋಗ್ಯ ಕೇಂದ್ರಗಳು | 184 | 198 | 213 |
| 2. | ಪ್ರಾಥಮಿಕ ಆರೋಗ್ಯ ಕೇಂದ್ರಗಳು | 1262 | 1297 | 1357 |
| 3. | ಪ್ರಾಥಮಿಕ ಆರೋಗ್ಯ ಘಟಕಗಳು | 623 | 622 | 613 |
| 4. | ಉಪಕೇಂದ್ರಗಳು | 7793 | 7793 | 7793 |
| 5. | ಹಾಸಿಗೆಗಳು | 10900 | 11899 | 12631 |

# ಆಸ್ಪತ್ರೆ ಫಾರ್ಮಸಿ ಕಾರ್ಯಕ್ರಮ

## ಪರಿಚಯ

ಆಸ್ಪತ್ರೆ ಫಾರ್ಮಸಿ ಕಾರ್ಯಕ್ರಮವನ್ನು ರಾಜ್ಯ ಸರ್ಕಾರವು ಅನುಷ್ಠಾನಗೊಳಿಸಿದೆ. ಇದು ರಾಜ್ಯ ವಲಯದ ಕಾರ್ಯಕ್ರಮವಾಗಿದೆ.

## ಉದ್ದೇಶಗಳು

1. ತಾಂತ್ರಿಕವಾಗಿ ಉತ್ತಮ ಮಟ್ಟದ ಔಷಧ ಸಂಸ್ಕರಣೆ ಮತ್ತು ವಿತರಣಾ ವಿಭಾಗ, ಸೆಂಟ್ರಲ್ ಸ್ಟರೈಲ್ ಸಪ್ಲೈಸ್ ವಿಭಾಗ ಮತ್ತು ದಾಸ್ತಾನು ಪದ್ಧತಿಗಳನ್ನು ರೂಢಿಸುವುದು.
2. ಆಸ್ಪತ್ರೆ ಸಿಬ್ಬಂದಿಗಳ ಮತ್ತು ರೋಗಿಗಳ ಉಪಯೋಗಕ್ಕಾಗಿ ಒಂದು "ಔಷಧಿ ಮಾಹಿತಿ ಸೇವೆಯನ್ನು" ಸ್ಥಾಪಿಸುವುದು.
3. ರಾಜ್ಯ ಸರ್ಕಾರೀ ಆಸ್ಪತ್ರೆಗಳಲ್ಲಿ ರೋಗಿಗಳ ಉಪಯೋಗಕ್ಕಾಗಿ ಜೀವ ಉಳಿಸುವ ಐ.ವಿ. ದ್ರಾವಣಗಳಾದ ಗ್ಲೂಕೋಸ್, ಗ್ಲೂಕೋಸ್ ಸಲೈನ್, ನಾರ್ಮಲ್ ಸಲೈನ್ ಇತ್ಯಾದಿಗಳನ್ನು ತಯಾರಿಸುವುದು.

   ಈ ಕೆಳಕಂಡ 14 ಆಸ್ಪತ್ರೆಗಳಲ್ಲಿ ಫಾರ್ಮಸಿ ಘಟಕಗಳು ಕಾರ್ಯ ನಿರ್ವಹಿಸುತ್ತವೆ.

| ಕ್ರ.ಸಂ. | ಆಸ್ಪತ್ರೆಯ ಹೆಸರು |
|---|---|
| 1. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 2. | ಬೌರಿಂಗ್ ಮತ್ತು ಲೇಡಿಕರ್ಜನ್ ಆಸ್ಪತ್ರೆ, ಬೆಂಗಳೂರು |
| 3. | ಕೆ.ಆರ್. ಆಸ್ಪತ್ರೆ, ಮೈಸೂರು |
| 4. | ವೆನ್‌ಲಾಕ್ ಆಸ್ಪತ್ರೆ, ಮಂಗಳೂರು |
| 5. | ಸಿ.ಜಿ.ಆಸ್ಪತ್ರೆ, ದಾವಣಗೆರೆ |
| 6. | ಕೆ.ಎಂ.ಸಿ. ಆಸ್ಪತ್ರೆ, ಹುಬ್ಬಳ್ಳಿ |
| 7. | ಜಿಲ್ಲಾ ಆಸ್ಪತ್ರೆ, ಬೆಳಗಾಂ |
| 8. | ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ |
| 9. | ವೈದ್ಯಕೀಯ ಮಹಾವಿದ್ಯಾಲಯ ಆಸ್ಪತ್ರೆ ಬಳ್ಳಾರಿ |
| 10. | ಮೆಗ್ಗಾನ್ ಜಿಲ್ಲಾ ಆಸ್ಪತ್ರೆ, ಶಿವಮೊಗ್ಗ |
| 11. | ಜಿಲ್ಲಾ ಆಸ್ಪತ್ರೆ, ಮಂಡ್ಯ |
| 12. | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ |
| 13. | ಜಿಲ್ಲಾ ಆಸ್ಪತ್ರೆ, ಬಿಜಾಪುರ |
| 14. | ಜಿಲ್ಲಾ ಆಸ್ಪತ್ರೆ, ಬೀದರ್ |

ಶಿವಮೊಗ್ಗ ಮತ್ತು ಕೋಲಾರದಲ್ಲಿ ಹೊಸ ಕಟ್ಟಡಗಳಿಗೆ ಹೊಸ ಯಂತ್ರೋಪಕರಣಗಳನ್ನು ಒದಗಿಸಬೇಕಾಗಿದೆ. ಹಾಸನ ಮತ್ತು ರಾಯಚೂರಿನಲ್ಲಿ ಕಟ್ಟಡದ ಕಾರ್ಯ ಪ್ರಗತಿಯಲ್ಲಿದೆ. ತುಮಕೂರು ಮತ್ತು ಕಾರವಾರದ ಘಟಕಗಳಿಗೆ ಹೊಸ ಕಟ್ಟಡ ಕಟ್ಟಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದ್ದು ಕಟ್ಟಡದ ಕಾರ್ಯ ಪ್ರಾರಂಭವಾಗ ಬೇಕಾಗಿದೆ. ತುಮಕೂರು ಮತ್ತು ಕಾರವಾರದಲ್ಲಿ ಹೊಸ ಕಟ್ಟಡ ನಿರ್ಮಾಣಕ್ಕೆ ಆಡಳಿತ ಮಂಜೂರಾತಿ ನೀಡಲಾಗಿದ್ದು ಲೋಕೋಪಯೋಗಿ ಇಲಾಖೆಯವರು ಕಟ್ಟಡ ನಿರ್ಮಾಣ ಕೆಲಸವನ್ನು ಕೈಗೊಳ್ಳಬೇಕಾಗಿದೆ.

ವೈದ್ಯಕೀಯ ನಿರ್ದೇಶನಾಲಯದಡಿಯಲ್ಲಿ ಒಂಬತ್ತು ಆಸ್ಪತ್ರೆ ಫಾರ್ಮಸಿ ಘಟಕಗಳು ಮತ್ತು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದಡಿಯಲ್ಲಿ ಒಂದು ಆಸ್ಪತ್ರೆ ಫಾರ್ಮಸಿ ಘಟಕ ಇವುಗಳಿಗೆ ಪ್ರತ್ಯೇಕವಾದ ಬಜೆಟ್ ಇರುವುದಿಲ್ಲ. ಇವುಗಳ ವೆಚ್ಚವನ್ನು ಆಯಾ ಆಸ್ಪತ್ರೆಯ ಬಜೆಟ್‌ನ ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ಭರಿಸಲಾಗುತ್ತದೆ.

**ಭೌತಿಕ ಪ್ರಗತಿ**

ಕಟ್ಟಡ : ಈ ಕೆಳಕಂಡ ಘಟಕಗಳಿಗೆ ಹೊಸ ಕಟ್ಟಡವನ್ನು ಒದಗಿಸಲಾಗುತ್ತದೆ.

1. ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ
2. ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ
3. ಶ್ರೀ ಚಾಮರಾಜೇಂದ್ರ ಆಸ್ಪತ್ರೆ, ಹಾಸನ
4. ಜಿಲ್ಲಾ ಆಸ್ಪತ್ರೆ, ತುಮಕೂರು
5. ಜಿಲ್ಲಾ ಆಸ್ಪತ್ರೆ, ರಾಯಚೂರು
6. ಜಿಲ್ಲಾ ಆಸ್ಪತ್ರೆ, ಕಾರವಾರ
7. ವಿಕ್ಟೋರೀಯಾ ಆಸ್ಪತ್ರೆ, ಬೆಂಗಳೂರು, ಬೃಹತ್ ಯೋಜನೆಯಡಿಯಲ್ಲಿ
8. ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು ಬೃಹತ್ ಯೋಜನೆಯಡಿಯಲ್ಲಿ ಉಳಿದ ಘಟಕಗಳು ಹಾಲಿ ಇರುವ ಆಸ್ಪತ್ರೆಯ ಕಟ್ಟಡಗಳಲ್ಲೇ ಕಾರ್ಯ ನಿರ್ವಹಿಸುತ್ತಿವೆ.

**ಪರವಾನಗಿ**

ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಘಟಕಗಳಿಗೂ ಔಷಧ ಮತ್ತು ಸೌಂದರ್ಯ ವರ್ಧಕ ಕಾಯಿದೆ 1940 ಮತ್ತು ಅದರ ನಿಯಮಾವಳಿಗಳ ಪ್ರಕಾರ ಔಷಧಗಳನ್ನು ತಯಾರಿಸಲು ಪರವಾನಗಿಯನ್ನು ಪಡೆಯಲಾಗಿದೆ.

**ಯಂತ್ರೋಪಕರಣಗಳು**

ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ಘಟಕಗಳಿಗೂ ಐ.ವಿ.ದ್ರಾವಣ ತಯಾರಿಕೆಯನ್ನು ಹೆಚ್ಚಿಸಲು ಮತ್ತು ತಾಂತ್ರಿಕತೆಯನ್ನು ತಹಲ್ ವರೆಗೆ ತರಲು ಹೊಸ ಉಪಕರಣಗಳನ್ನು ಒದಗಿಸಲಾಗಿದೆ.

**ತಯಾರಿಕೆ :** ಆಸ್ಪತ್ರೆ ಫಾರ್ಮಸಿ ಘಟಕಗಳಲ್ಲಿ ಈ ಕೆಳಕಾಣಿಸಿದ ಐ.ವಿ.ದ್ರಾವಣ ಚುಚ್ಚು ಮದ್ದುಗಳನ್ನು ತಯಾರಿಸಲಾಗುತ್ತಿದೆ.

ಅ) ಡೆಕ್ಟ್ರೋಸ್

ಆ) ಡೆಕ್ಟ್ರೋಸ್ ಸಲೈನ್

ಇ) ನಾರ್ಮಲ್ ಸಲೈನ್

ಈ) ಮ್ಯಾನಿಟಾಲ್

ಉ) ವಾಟರ್‌ಫಾರ್ ಇಂಜೆಕ್ಷನ್

ಊ) ಎ.ಸಿ.ಡಿ. ದ್ರಾವಣ (ರಕ್ತ ನಿಧಿಗಳಿಗೆ)

**ಗುಣ ನಿಯಂತ್ರಣ**

ಈ ಕೆಳಕಂಡ ಘಟಕಗಳಲ್ಲಿ ಗುಣ ನಿಯಂತ್ರಣ ಕಾರ್ಯಕ್ಕೆ ಸೌಲಭ್ಯಗಳನ್ನು ಒದಗಿಸಲಾಗಿದೆ.

1. ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ
2. ಕೆ.ಎಂ.ಸಿ. ಆಸ್ಪತ್ರೆ, ಹುಬ್ಬಳ್ಳಿ
3. ವೈದ್ಯಕೀಯ ಕಾಲೇಜು ಆಸ್ಪತ್ರೆ,ಬಳ್ಳಾರಿ
4. ಜಿಲ್ಲಾ ಆಸ್ಪತ್ರೆ, ವಿಜಾಪುರ

ಈ ಕೆಳಕಂಡ ಘಟಕಗಳಲ್ಲಿ ಭಾಗಶಃ ಸೌಲಭ್ಯವಿದ್ದು ಕೊರತೆಯನ್ನು ಮೇಲಿನ ಘಟಕಗಳಿಂದ ಮತ್ತು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳಿಂದ ಪೂರೈಸಿಕೊಳ್ಳಲಾಗುತ್ತಿದೆ.

1. ಜಿಲ್ಲಾ ಆಸ್ಪತ್ರೆ, ಮಂಡ್ಯ
2. ಜಿಲ್ಲಾ ಆಸ್ಪತ್ರೆ, ಬೀದರ್
3. ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ
4. ವೆನ್‌ಲಾಕ್ ಆಸ್ಪತ್ರೆ ಮಂಗಳೂರು
5. ಸಿ.ಜಿ.ಆಸ್ಪತ್ರೆ, ದಾವಣಗೆರೆ
6. ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು
7. ಬೌರಿಂಗ್ ಮತ್ತು ಲೇಡಿಕರ್ಜನ್ ಆಸ್ಪತ್ರೆ, ಬೆಂಗಳೂರು
8. ಕೆ.ಆರ್.ಆಸ್ಪತ್ರೆ, ಮೈಸೂರು
9. ಜಿಲ್ಲಾ ಆಸ್ಪತ್ರೆ, ಬೆಳಗಾಂ
10. ಮೆಗ್ಗಾನ್ ಆಸ್ಪತ್ರೆ, ಶಿವಮೊಗ್ಗ

ಪ್ರಾರಂಭದಲ್ಲಿ ಟ್ರಯಲ್ ತಯಾರಿಕೆಯಲ್ಲಿನ ಒಂದೆರಡು ಬ್ಯಾಚ್ ಗಳನ್ನು ಬಿಟ್ಟರೆ, ತಯಾರಾಗಿರುವ ಎಲ್ಲಾ ಬ್ಯಾಚ್‌ಗಳು ಗುಣ ನಿಯಂತ್ರಣ ಪರೀಕ್ಷೆಯಲ್ಲಿ ತೇರ್ಗಡೆಯಾಗಿದೆ.

ಎಲ್ಲಾ ಘಟಕಗಳಲ್ಲಿ ಟ್ರಯಲ್ ತಯಾರಿಕೆಯಲ್ಲಿನ ಒಂದೆರಡು ಬ್ಯಾಚ್‌ಗಳನ್ನು ಬಿಟ್ಟರೆ, ತಯಾರಾಗಿರುವ ಎಲ್ಲಾ ಬ್ಯಾಚ್‌ಗಳು ಗುಣ ನಿಯಂತ್ರಣ ಪರೀಕ್ಷೆಯಲ್ಲಿ ತೇರ್ಗಡೆಯಾಗಿವೆ.

ಎಲ್ಲಾ ಘಟಕಗಳಲ್ಲಿ ನಿಯಂತ್ರಣ ವಿಭಾಗವನ್ನು ಅಭಿವೃದ್ಧಿ ಪಡಿಸಲಾಗುವುದು.

# ಕುಟುಂಬಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ ಕಾರ್ಯಕ್ರಮ

## 1. ಸಮಸ್ಯೆಗಳು

ಕರ್ನಾಟಕದ ಜನಸಂಖ್ಯೆಯು ವೇಗವಾಗಿ ಬೆಳೆಯುತ್ತಿದೆ. ಯೋಜನಾ ಅಭಿವೃದ್ಧಿ ಕಾರ್ಯಕ್ರಮಗಳು ಸಾಕಷ್ಟು ಕಾರ್ಯಗತವಾಗಿದ್ದರೂ ಸಹ ಅವುಗಳ ಪ್ರಯೋಜನ ಸಾಕಷ್ಟು ಪ್ರಮಾಣದಲ್ಲಿ ಲಭ್ಯವಾಗುತ್ತಿಲ್ಲ, ಕರ್ನಾಟಕ ರಾಜ್ಯದ ಜನಸಂಖ್ಯೆ ಬೆಳವಣಿಗೆ ದರವು 1941ರಲ್ಲಿ ಶೇಕಡಾ 1.3 ರಷ್ಟಿದ್ದದ್ದು 1971ರಲ್ಲಿ ಶೇ.2.2 ಕ್ಕೆ ಏರಿತ್ತು. ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ, ಜನಾರೋಗ್ಯ ಮತ್ತು ವೈದ್ಯಕೀಯ ಸೇವೆಗಳು ಸೇರಿದಂತೆ ದೊರೆತ ಸೌಲಭ್ಯಗಳ ಪರಿಣಾವಾಗಿ ಮರಣ ಪ್ರಮಾಣ ತೀವ್ರತರವಾಗಿ ಇಳಿಯಿತು.ಆದರೆ ಜನನ ಫಲವತ್ತತೆಯ ಪ್ರಮಾಣ ಮಾತ್ರ ಹಾಗೇ ಉಳಿಯಿತು.

## 2. ಕಾರ್ಯಕ್ರಮ

ಭಾರತ ಸರ್ಕಾರವು ಜನಸಂಖ್ಯಾ ಬೆಳವಣಿಗೆಗೆ ಕಡಿವಾಣ ಹಾಕಲು ಶೇಕಡಾ ನೂರರಷ್ಟು ಕೇಂದ್ರೀಯ ಅನುದಾನ ಸಹಾಯದ ಮೂಲಕ ಕುಟುಂಬಕಲ್ಯಾಣ ಕಾರ್ಯಕ್ರಮವನ್ನು 1952ರಲ್ಲಿ ಹಮ್ಮಿಕೊಂಡಿತು.

ಕುಟುಂಬಕಲ್ಯಾಣ ಕಾರ್ಯಕ್ರಮ ಮತ್ತು ಲಸಿಕಾ ಕಾರ್ಯಕ್ರಮದ ಗುರಿಯು ಕೆಳಕಂಡಂತಿವೆ.

1. 2000 ಇಸವಿಯ ವೇಳೆಗೆ ಜನನ ಪ್ರಮಾಣವನ್ನು ಪ್ರತಿ ಸಾವಿರ ಜನ ಸಂಖ್ಯೆಗೆ 21ಕ್ಕೆ ಇಳಿಸುವುದು.
2. 2000 ಇಸವಿಯ ವೇಳೆಗೆ ಮರಣ ಪ್ರಮಾಣವನ್ನು ಪ್ರತಿ ಸಾವಿರ ಜನಸಂಖ್ಯೆಗೆ 9ಕ್ಕೆ ಇಳಿಸುವುದು.
3. ಶಿಶು ಮರಣ ಪ್ರಮಾಣವನ್ನು ಪ್ರತಿ ಸಾವಿರ ಜೀವಂತ ಜನನಕ್ಕೆ 60ಕ್ಕಿಂತ ಕಡಿಮೆಗೊಳಿಸುವುದು.
4. ನಿವ್ವಳ ಜನನ ಪ್ರಮಾಣ ದರವನ್ನು 1ಕ್ಕೆ ಇಳಿಸುವುದು.
5. ಜನಸಂಖ್ಯಾ ಬೆಳವಣಿಗೆ ದರವನ್ನು ಶೇಕಡಾ 1.2ಕ್ಕೆ ಇಳಿಸುವುದು
6. ಅರ್ಹ ದಂಪತಿಗಳ ರಕ್ಷಣ ದರವನ್ನು 60 ಕ್ಕಿಂತ ಜಾಸ್ತಿ ಮಾಡುವುದು ಮತ್ತು
7. ಜನನ ಕಾಲದಲ್ಲಿ ನಿರೀಕ್ಷಿತ ಆಯು ಪ್ರಮಾಣವನ್ನು 64 ವರ್ಷಕ್ಕಿಂತ ಅಧಿಕಗೊಳಿಸುವುದು.
8. ಲಸಿಕಾ ಕಾರ್ಯಕ್ರಮ

| | |
|---|---|
| ಅ) ಟಿ.ಟಿ. (ಗರ್ಭಿಣಿ ಸ್ತ್ರೀ) | ಶೇ. 100 ರಷ್ಟು |
| ಆ) ಡಿಪಿಟಿ (ಶಿಶುಗಳು) | ಶೇ. 100 ರಷ್ಟು |
| ಇ) ಪೋಲಿಯೋ (ಶಿಶುಗಳು) | ಶೇ. 100 ರಷ್ಟು |

ಈ) ಬಿಸಿಜಿ (-”-) ಶೇ. 100 ರಷ್ಟು

ಉ) ದಡಾರ (-”-) ಶೇ. 100 ರಷ್ಟು

**3. ಕುಟುಂಬಕಲ್ಯಾಣ ಕಾರ್ಯಕ್ರಮ ಪ್ರಾರಂಭವಾದಂದಿನಿಂದ ಆದ ಪರಿಣಾಮ :**

ಈ ಕಾರ್ಯಕ್ರಮವನ್ನು ಜಾರಿಗೊಳಿಸದಿದ್ದರೆ 1991ರ ಜನಗಣತಿಯ ಪ್ರಕಾರ ಈಗಿರುವ ರಾಜ್ಯದ 4.48 ಕೋಟಿ ಜನಸಂಖ್ಯೆಯ ಬದಲಾಗಿ 5.60 ಕೋಟಿಯಾಗಿತ್ತಿದ್ದಿತು. ಈ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಿದ್ದರಿಂದ ರಾಜ್ಯದಲ್ಲಿ ಸುಮಾರು 1.3 ಕೋಟಿಯಷ್ಟು ಜನನ ಸಂಖ್ಯೆಯನ್ನು ತಡೆಗಟ್ಟಿದಂತಾಗಿದೆ.

ಈ ಕಾರ್ಯಕ್ರಮದಡಿಯಲ್ಲಿ ಸಾಧಿಸಲಾದ ಮುಖ್ಯ ಸಾಧನೆಗಳನ್ನು ಈ ಕೆಳಗೆ ಕೊಡಲಾಗಿದೆ.

1. 1961ರಲ್ಲಿ 41 ರಷ್ಟಿದ್ದ ಜನನ ಪ್ರಮಾಣ 1992ರಲ್ಲಿ 26.2ಕ್ಕೆ ಇಳಿದಿದೆ.
2. 1961ರಲ್ಲಿ 22.2 ರಷ್ಟಿದ್ದ ಮರಣ ಪ್ರಮಾಣವು 1992ರಲ್ಲಿ 8.5ಕ್ಕೆ ಇಳಿದಿದೆ.
3. 1971ರಲ್ಲಿ 95 ಇದ್ದ ಶಿಶು ಮರಣ ಪ್ರಮಾಣವು 1992ರಲ್ಲಿ 73ಕ್ಕೆ ಇಳಿದಿದೆ.
4. 1971ರಲ್ಲಿ ಗ್ರಾಮೀಣ ಪ್ರದೇಶದಲ್ಲಿದ್ದ 154.9 ಹಾಗೂ ನಗರ ಪ್ರದೇಶದಲ್ಲಿದ್ದ 124.9ರ ಸಾಮಾನ್ಯ ಫಲವತ್ತತೆಯ ದರವು 1987 ರಲ್ಲಿ ಕ್ರಮವಾಗಿ 122.9 ಮತ್ತು 102.3ಕ್ಕೆ ಇಳಿಯಿತು.
5. 1972ರಲ್ಲಿ 4.5ರಷ್ಟಿದ್ದ ಒಟ್ಟು ಫಲವತ್ತತೆಯು 1987ರಲ್ಲಿ 3.3ಕ್ಕೆ ಇಳಿಯಿತು.
6. 1961ರಲ್ಲಿ 40.2ರಷ್ಟಿದ್ದ ಜನನ ಕಾಲದಲ್ಲಿನ ನಿರೀಕ್ಷಿತ ಆಯುಃ :ಪ್ರಮಾಣವು ಪುರುಷರಿಗೆ 64.15 (ಅಂದಾಜು) ಹಾಗೂ ಸ್ತ್ರೀಯರಿಗೆ 65,30ಕ್ಕೆ ಏರಿತು.
7. 1961ರಲ್ಲಿ ಸ್ತ್ರೀಯರ ವಿವಾಹದ ಸರಾಸರಿ ವಯಸ್ಸು 16.4 ಇದ್ದು 1981ರಲ್ಲಿ 19.21ಕ್ಕೆ ಏರಿತು ಹಾಗೂ 1961ರಲ್ಲಿ ಪುರುಷರ ವಿವಾಹದ ಸರಾಸರಿ ವಯಸ್ಸು 24.17 ಇದ್ದದ್ದು 1981ರಲ್ಲಿ 25.86ಕ್ಕೆ ಏರಿತು.
8. 1970ರಲ್ಲಿ 58.8 ರಷ್ಟಿದ್ದ ನವಜಾತ ಶಿಶು ಮರಣ ಪ್ರಮಾಣದರವು 1986ರಲ್ಲಿ 54.4ಕ್ಕೆ ಇಳಿಯಿತು.
9. 1970ರಲ್ಲಿದ್ದ 0-4 ವರ್ಷದೊಳಗಿನ ಮಕ್ಕಳ ಅಂದಾಜು ಮರಣ ಪ್ರಮಾಣ ದರವು 37.5 ಇದ್ದದ್ದು 1986ರಲ್ಲಿ 24.5ಕ್ಕೆ ಇಳಿಯಿತು.
10. 1981ರಲ್ಲಿದ್ದ 23.7 ರಷ್ಟು ಅರ್ಹ ದಂಪತಿಗಳ ರಕ್ಷಣಾ ದರವು 1993ರಲ್ಲಿ 50.25ಕ್ಕೆ ಏರಿತು. (ಜಿಲ್ಲಾವಾರು ಅರ್ಹ ದಂಪತಿಗಳ ರಕ್ಷಣಾ ದರವನ್ನು ಅನುಬಂಧ - 3 ರಲ್ಲಿ ನಮೂದಿಸಲಾಗಿದೆ).
11. 1971-81ರಲ್ಲಿದ್ದ ಜನಸಂಖ್ಯೆಯ ಬೆಳವಣಿಗೆ ದರ ಶೇ. 2.4ರಷ್ಟಿದ್ದದ್ದು 1981-91ರಲ್ಲಿ ಶೇ. 1.9ಕ್ಕೆ ಇಳಿಯಿತು.

12. ಕುಟುಂಬ ಕಲ್ಯಾಣ ಕಾರ್ಯಕ್ರಮದಡಿಯಲ್ಲಿ ಅಂದಾಜಿನ ಪ್ರಕಾರ ಸುಮಾರು 1.3 ಕೋಟಿಯಷ್ಟು ಜನನಗಳನ್ನು ತಡೆಗಟ್ಟಿದಂತಾಗಿದೆ.

13. 1993-94ರಲ್ಲಿ ಲಸಿಕಾ ಕಾರ್ಯಕ್ರಮದಡಿಯಲ್ಲಿ ಸಾಧಿಸಲಾದ ಪ್ರಗತಿಯನ್ನು ಈ ಕೆಳಗೆ ಕೊಡಲಾಗಿದೆ.

ಅ) ಡಿಪಿಟಿ - ಶೇ. 92 ಆ) ಪೋಲಿಯೋ ಶೇ. 92

ಇ) ಬಿಸಿಜಿ ಶೇ. 100 ಈ) ದಡಾರ ಶೇ.85 ಉ) ಟಿ.ಟಿ. ಗರ್ಭಿಣಿ ಸ್ತ್ರೀ ಶೇ.95

14. 1992-93ರಲ್ಲಿ ಕುಟುಂಬಕಲ್ಯಾಣ ಕಾರ್ಯಕ್ರಮದಡಿಯಲ್ಲಿ ಶಸ್ತ್ರ ಚಿಕಿತ್ಸೆ ಮತ್ತು ವಂಕಿ ಅಳವಡಿಕೆ ವಿಧಾನಗಳನ್ನು ಅನುಸರಿಸಿದ ಫಲಾನುಭವಿಗಳು ಹೊಂದಿರುವ ಸರಾಸರಿ ಜೀವಂತ ಮಕ್ಕಳ ವಿವರಗಳನ್ನು ಈ ಕೆಳಗೆ ಕೊಡಲಾಗಿದೆ.

| | |
|---|---|
| ವ್ಯಾಸೆಕ್ಟಮಿ | 2.7 |
| ಟ್ಯುಬೆಕ್ಟಮಿ | 2.8 |
| ವಂಕಿ ಅಳವಡಿಕೆ | 1.9 |

15) 1992-93ನೇ ಸಾಲಿನಲ್ಲಿ ವಿವಿಧ ವಿಧಾನಗಳನ್ನು ಅನುಸರಿಸಿದವರ ಸರಾಸರಿ ವಯಸ್ಸು ಈ ಕೆಳಗಿನಂತಿದೆ.

| | | |
|---|---|---|
| 1. | ವ್ಯಾಸೆಕ್ಟಮಿ | 32.7 |
| 2. | ಟ್ಯುಬೆಕ್ಟಮಿ | 27.1 |
| 3. | ವಂಕಿ ಅಳವಡಿಕೆ | 24.7 |

## 4. ಕುಟುಂಬಕಲ್ಯಾಣ ಕಾರ್ಯಕ್ರಮದ ಅನುಷ್ಠಾನದಲ್ಲಿ ಅನುಸರಿಸಲಾದ ವಿಧಾನಗಳು :

1. ಸಮೂಹ ಮಾಧ್ಯಮ ಹಾಗೂ ಐ.ಇ.ಸಿ. ಚಟುವಟಿಕೆಗಳ ಮೂಲಕ ಅರ್ಹ ದಂಪತಿಗಳನ್ನು ಕುಟುಂಬಕಲ್ಯಾಣ ವಿಧಾನಗಳನ್ನು ಅನುಸರಿಸುವಂತೆ ಮನ ಒಲಿಸುವುದು.

    ಅ) ಸಣ್ಣ ಕುಟುಂಬ ತತ್ವ

    ಆ) ತಡವಾಗಿ ವಿವಾಹವಾಗುವುದರ ಪ್ರಯೋಜನ

    ಇ) ಅಂತರದ ವಿಧಾನಗಳು

    ಈ) ಶಿಶು ಉಳಿಯುವಿಕೆ ಮತ್ತು ಸುರಕ್ಷಿತ ತಾಯ್ತನ

    ಉ) ಆರು ಮಾರಕ ರೋಗಗಳ ವಿರುದ್ಧ ಲಸಿಕೆ ನೀಡುವಿಕೆ.

2. ಕುಟುಂಬಕಲ್ಯಾಣ ಮತ್ತು ಲಸಿಕಾ ಸೇವೆಗಳನ್ನು 176 ಆಸ್ಪತ್ರೆಗಳು, 1357 ಪ್ರಾಥಮಿಕ ಆರೋಗ್ಯ ಕೇಂದ್ರಗಳು, 613 ಪ್ರಾಥಮಿಕ ಆರೋಗ್ಯ ಘಟಕಗಳು ಮತ್ತು 7793 ಉಪಕೇಂದ್ರಗಳ ಮೂಲಕ ಒದಗಿಸಲಾಗುತ್ತಿದೆ.

3. ಸಂತಾನಹರಣ ಶಸ್ತ್ರಚಿಕಿತ್ಸೆ ನಡೆಸಲು ಖಾಸಗಿ ನರ್ಸಿಂಗ್ ಹೋಂಗಳಿಗೆ ಮಾನ್ಯತೆ ನೀಡುವುದು.

4. ಸಂತಾನಹರಣ ಶಸ್ತ್ರಚಿಕಿತ್ಸೆ ನಡೆಸಲು ಆರೋಗ್ಯಾಧಿಕಾರಿಗಳಿಗೆ ಸೂಕ್ತ ತರಬೇತಿ ನೀಡುವುದು.

5. ಗ್ರಾಮಾಂತರ ಪ್ರದೇಶಗಳಲ್ಲಿ ಸುರಕ್ಷಿತ ಹೆರಿಗೆ ಮಾಡಲು ದಾಯಿಯರಿಗೆ ತರಬೇತಿ ನೀಡುವುದು.

6. ವಂಕಿ ಅಳವಡಿಕೆ ವಿಧಾನದ ಬಗ್ಗೆ ಕಿರಿಯ ಮತ್ತು ಹಿರಿಯ ಆರೋಗ್ಯ ಸಹಾಯಕಿಯರಿಗೆ ತರಬೇತಿ ನೀಡುವುದು.

7. ಕುಟುಂಬಕಲ್ಯಾಣ ಮತ್ತು ಲಸಿಕಾ ಕಾರ್ಯಕ್ರಮ ಅನುಷ್ಠಾನದಲ್ಲಿ ಸ್ವಯಂ ಸೇವಾ ಸಂಸ್ಥೆಗಳನ್ನು ತೊಡಗಿಸಿಕೊಳ್ಳುವುದು.

8. ಸರ್ಕಾರದ ಇತರೇ ಇಲಾಖೆಗಳ ಸಹಕಾರ ಪಡೆಯುವುದು.

9. ಪ್ರತಿ ಜಿಲ್ಲೆಗೆ ಪ್ರತಿ ತಿಂಗಳಿಗೆ 15,000-00 ರೂ.ಗಳ ಅದೃಷ್ಟ ಬಹುಮಾನ ಯೋಜನೆಯನ್ನು ಜಾರಿಗೊಳಿಸುವುದು.

10. ಎರಡು ಮಕ್ಕಳನ್ನು ಮಾತ್ರ ಹೊಂದಿರುವ ಸರ್ಕಾರೀ ನೌಕರರಿಗೆ ಒಂದು ಹೆಚ್ಚುವರಿ ಬಡ್ತಿಯನ್ನು ನೀಡುವುದು.

11. ಸರ್ಕಾರೀ ನೌಕರರಿಗೆ ವಿಶೇಷ ಸಾಂದರ್ಭಿಕ ರಜೆ ನೀಡುವುದು.

12. ಶಸ್ತ್ರಚಿಕಿತ್ಸೆಗೆ ಒಳಪಡುವ ಫಲಾನುಭವಿಗಳಿಗೆ ಹಸಿರು ಪತ್ರ ವಿತರಣೆ

13. ಶಸ್ತ್ರಚಿಕಿತ್ಸೆಗೆ ಒಳಪಟ್ಟವರಿಗೆ ಮತ್ತು ವಂಕಿ ಅಳವಡಿಸಿಕೊಂಡವರಿಗೆ ಪ್ರೋತ್ಸಾಹ ಧನ ನೀಡುವುದು.

## 5. ಕುಟುಂಬಕಲ್ಯಾಣ ಮತ್ತು ಲಸಿಕಾ ಕಾರ್ಯಕ್ರಮ ಪ್ರಗತಿ :

1991-92, 1992-93 ಮತ್ತು 1993-94ನೇ ಸಾಲಿನ ಕುಟುಂಬಕಲ್ಯಾಣಕಾರ್ಯಕ್ರಮದ ವಿವಿಧ ವಿಧಾನಗಳ ಪ್ರಗತಿಯನ್ನು ಅನುಬಂಧ-1 ರಲ್ಲಿ ಕೊಡಲಾಗಿದೆ.

## 6. ಕುಟುಂಬಕಲ್ಯಾಣ ಕಾರ್ಯಕ್ರಮಗಳಿಗೆ ರೂಪಿಸಿರುವ ಹೊಸ ಮಾರ್ಗ:

ಆಂಧ್ರಪ್ರದೇಶ ಒಳಗೊಂಡಂತೆ ದಕ್ಷಿಣ ರಾಜ್ಯಗಳ ಸಾಧನೆಗಳಿಗೆ ಹೋಲಿಸಿದಾಗ ಕೆಲವು ಮುಖ್ಯ ಸೂಚಿಗಳಲ್ಲಿ (ಜನನದರ, ಮರಣ ದರ ಮತ್ತು ಶಿಶು ಮರಣದರ) ಕರ್ನಾಟಕ ಸಾಧನೆಯಲ್ಲಿ ಇಳಿಕೆಯನ್ನು ಕರ್ನಾಟಕ ಸರ್ಕಾರವು ಗಂಭೀರವಾಗಿ ಪರಿಗಣಿಸಿದೆ.

ಕುಟುಂಬಕಲ್ಯಾಣ ಕಾರ್ಯಕ್ರಮದ ಆಚರಣೆಯಲ್ಲಿ ಹೊಸ ಬದಲಾವಣೆಯನ್ನು ತರುವ ಸಮಯ ಒದಗಿ ಬಂದಿದೆ.

### 1. ಜನನದ ಅಂತರದ ಮಾರ್ಗ :

ಕುಟುಂಬಕಲ್ಯಾಣ ಕಾರ್ಯಕ್ರಮವು ಸಂತಾನ ಹರಣ ಶಸ್ತ್ರಚಿಕಿತ್ಸೆಯ ಅಂಶದ ಮೇಲೆ ಕೇಂದ್ರೀಕೃತವಾಗಿದ್ದರೂ ಸಹ ಜನಸಂಖ್ಯೆ ಸಮಸ್ಯೆಗೆ ನೈಜ ಪರಿಹಾರ ಒದಗಿಸುವಲ್ಲಿ ಅದು ವಿಫಲಗೊಂಡಿದೆ. ಅಂತರ ವಿಧಾನಗಳಾದ ವಂಕಿ, ನಿರೋಧ್, ಮತ್ತು ನುಂಗುವ ಗುಳಿಗೆ ಇವುಗಳ ಪ್ರಾಮುಖ್ಯತೆಯನ್ನು ಗುರುತಿಸಬೇಕಾಗಿದೆ. ಈ ವಿಧಾನಗಳ ಸಾಧನೆಯನ್ನು

ಹೆಚ್ಚಿಸಲು ಜಿಲ್ಲಾಧಿಕಾರಿಗಳು, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಎಲ್ಲಾ ಜಿಲ್ಲಾ ಕಾರ್ಯವರ್ಗದವರನ್ನು ಒಳಗೊಂಡ ಕ್ರಿಯಾ ಯೋಜನೆಯ ಕಾರ್ಯಕ್ರಮವನ್ನು ರೂಪಿಸಲಾಗುತ್ತಿದೆ.

**2. ಪುರುಷರು ಭಾಗವಹಿಸುವುದು :**

ಕರ್ನಾಟಕದಲ್ಲಿ ಶಸ್ತ್ರ ಚಿಕಿತ್ಸೆಯಾದವರಲ್ಲಿ ಶೇಕಡಾ 1 ಕ್ಕಿಂತ ಕಡಿಮೆ ಪುರುಷ ಶಸ್ತ್ರಚಿಕಿತ್ಸೆಯಾಗಿರುತ್ತದೆ. ಮುಂದಿನ ವರ್ಷದಲ್ಲಿ ಒಟ್ಟು ಶಸ್ತ್ರ ಚಿಕಿತ್ಸೆಯ ಗುರಿಯಲ್ಲಿ ಶೇ. 10ರಷ್ಟು ಪುರುಷ ಶಸ್ತ್ರಚಿಕಿತ್ಸೆಯ ಗುರಿಯನ್ನು ನಿಗಧಿಪಡಿಸಲಾಗಿದೆ. "ನೋ ಸ್ಕಾಲ್ಪಲ್ ಪುರುಷ ಶಸ್ತ್ರ ಚಿಕಿತ್ಸೆ" ತಂತ್ರದಲ್ಲಿ ಒಬ್ಬ ವೈದ್ಯರು ತರಬೇತಿ ಹೊಂದಿರುತ್ತಾರೆ ಮತ್ತು ಇನ್ನೂ ಹೆಚ್ಚು ವೈದ್ಯರಿಗೆ ತರಬೇತಿ ನೀಡಲಾಗುತ್ತದೆ.

**3. ಪು.ಶ.ಚಿ - ಹೆಣ್ಣುಮಗು ಮತ್ತು ಅಂತರ ಇವುಗಳ ಸಂಬಂಧ :**

ಪುರುಷ ಶಸ್ತ್ರಚಿಕಿತ್ಸೆಯನ್ನು ಹೆಚ್ಚು ಜನಪ್ರಿಯಗೊಳಿಸಲು ಸರ್ಕಾರವು ಕುಟುಂಬಕಲ್ಯಾಣ ತತ್ವ ವಿಧಾನವನ್ನು ಅನುಸರಿಸಿದವರಿಗೆ ಪ್ರೋತ್ಸಾಹ ಧನ ನೀಡಲು ಯೋಜಿಸಿದೆ. ಈ ಕಾರ್ಯಕ್ರಮದ ಪ್ರಕಾರ ಒಂದೇ ಹೆಣ್ಣು ಮಗುವನ್ನು ಹೊಂದಿದ್ದು ಪುರುಷಶಸ್ತ್ರಚಿಕಿತ್ಸೆ ಮಾಡಿಸಿಕೊಂಡು ಅಂತರದ ವಿಧಾನವನ್ನು ಅನುಸರಿಸಿದವರಿಗೆ ಪ್ರೋತ್ಸಾಹ ಧನವನ್ನು ಸಂದರ್ಭಾನುಸಾರವಾಗಿ 4,000 ರೂ.ನಿಂದ 10,000 ರೂ.ಗಳ ವರೆಗೆ ರಾಷ್ಟ್ರೀಯ ಉಳಿತಾಯ ಯೋಜನೆಯ ಸರ್ಟಿಫಿಕೇಟ್ ಮೂಲಕ ವಿತರಿಸಲಾಗುತ್ತಿದೆ.

**4. ಸಮುದಾಯ ಬಹುಮಾನಗಳು :**

ಕುಟುಂಬಕಲ್ಯಾಣ ಯೋಜನೆಯನ್ನು ಸರಿಪೂರ್ಣವಾಗಿ ಜಾರಿಗೊಳಿಸಲು ಗ್ರಾಮಸ್ಥರು ಸಮೂಹಿಕವಾಗಿ ಆಸಕ್ತಿ ತಳೆಯುವಂತೆ ಮಾಡುವ ಅವಶ್ಯಕತೆ ಇದೆ. ಈ ಸಂಬಂಧದಲ್ಲಿ ಯಾವ ಗ್ರಾಮ ಪಂಚಾಯ್ತಿಯು ಕುಟುಂಬಕಲ್ಯಾಣ ಕಾರ್ಯಕ್ರಮದಲ್ಲಿ ಅಸಾಧಾರಣ ಪ್ರಗತಿಯನ್ನು ಸಾಧಿಸುವುದೋ ಅಂತಹ ಗ್ರಾಮ ಪಂಚಾಯ್ತಿಗೆ, ಗ್ರಾಮಕ್ಕೆ ಅವಶ್ಯಕತೆ ಇರುವ ವಿದ್ಯುಚ್ಛಕ್ತೀಕರಣ, ಶಾಲಾ ಕೊಠಡಿ ನಿರ್ಮಾಣ, ಕೊಳವೆ ಬಾವಿಗಳನ್ನು ತೋಡಿಸುವುದು ಮುಂತಾದ ಸವಲತ್ತುಗಳನ್ನು ಒದಗಿಸುವ ಸಲುವಾಗಿ 50,000 ರೂ.ಗಳ ನಗದು ಹಣವನ್ನು ಒದಗಿಸಲಾಗುವುದು.

**5. ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳು :**

ಕುಟುಂಬಕಲ್ಯಾಣ ಕಾರ್ಯಕ್ರಮದ ಬಗ್ಗೆ ಅದರಲ್ಲೂ ವಿಶೇಷವಾಗಿ ಒಂದೇ ಹೆಣ್ಣು ಮಗುವನ್ನು ಹೊಂದಿರುವ ಕುಟುಂಬದವರನ್ನು ಪುರುಷ ಶಸ್ತ್ರಚಿಕಿತ್ಸೆಗೆ ಒಳಪಡುವಂತೆ ಮನಒಲಿಸಲು, ಅಂತರದ ವಿಧಾನವನ್ನು ಅನುಸರಿಸಲು ಮತ್ತು ವಿವಾಹದ ವಯಸ್ಸು ಇವುಗಳ ಬಗ್ಗೆ ಜನರಿಗೆ ಹೆಚ್ಚಿನ ಅರಿವು ಮೂಡಿಸುವ ಸಲುವಾಗಿ ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರಲಾಗುತ್ತಿದೆ.

ಕುಟುಂಬಕಲ್ಯಾಣ ಕ್ಷೇತ್ರದ ವಿವಿಧ ಮಾಹಿತಿಯನ್ನು ಜನಗಳಿಗೆ ಪ್ರಚಾರ ಮಾಡಲು ಬೇಕಾದ ಸಣ್ಣ ಮತ್ತು ದೊಡ್ಡ ಚಲನಚಿತ್ರಗಳನ್ನು ತಯಾರಿಸುವ ಬಗ್ಗೆ ಚಲನಚಿತ್ರ ನಿರ್ದೇಶಕರೊಡನೆ ಸಮಾಲೋಚಿಸಲು ಉದ್ದೇಶಿಸಲಾಗಿದೆ.

7. ಮಾಹಿತಿ ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳು

ಪರಸ್ಪರ ವ್ಯಕ್ತಿಯ, ವಿವಿಧ ಸಂಘಸಂಸ್ಥೆಗಳ, ವಿವಿಧ ಮಾಧ್ಯಮಗಳ ಮತ್ತು ಸಾಮೂಹಿಕ ಸಂಪರ್ಕದ ಮೂಲಕ ಜನಸಮುದಾಯದಲ್ಲಿ ಸಣ್ಣ ಕುಟುಂಬವನ್ನು ಹೊಂದುವುದರ ಅವಶ್ಯಕತೆ ಬಗ್ಗೆ ತಿಳಿವಳಿಕೆ ಮತ್ತು ಅದರ ಅನುಷ್ಠಾನವನ್ನು ಜಾರಿಗೆ ತರಲು ಭಾರತ ಸರ್ಕಾರದ ಮಾರ್ಗದರ್ಶನದಂತೆ 1993-94ನೇ ಸಾಲಿನಲ್ಲಿ ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳನ್ನು ನಡೆಸಲಾಯಿತು. ಅದರ ಸಾಧನೆಗಳನ್ನು ಈ ಕೆಳಗೆ ಕೊಡಲಾಗಿದೆ.

| | ಚಟುವಟಿಕೆಗಳು | ಗುರಿ | ಸಾಧನೆ |
|---|---|---|---|
| 1. | ವಸ್ತು ಪ್ರದರ್ಶನ | - | 39,147 |
| 2. | ಜಾನಪದ ಕಾರ್ಯಕ್ರಮ | 1625 | 1606 |
| 3. | ಅಂಗನವಾಡಿ ಕಾರ್ಯಕರ್ತೆಯರ ಮತ್ತು ಕಿರಿಯ ಮಹಿಳಾ ಆರೋಗ್ಯ ಕಾರ್ಯಕರ್ತೆಯರಿಗೆ ಜಂಟಿ ತರಬೇತಿ | 226 | 194 |
| 4. | ಪದವಿ ಪೂರ್ವ ವಿದ್ಯಾರ್ಥಿಗಳಿಗೆ ಚರ್ಚಾ ಸ್ಪರ್ಧೆಗಳು | 165 | 148 |
| 5. | ಚಲನಚಿತ್ರ ಪ್ರದರ್ಶನ | 4800 | 6569 |
| 6. | ತುಂಡು ಚಿತ್ರ ಪ್ರದರ್ಶನ | 8700 | 18237 |
| 7. | ಪತ್ರಿಕಾ ಪ್ರಕಟಣೆಗಳು | - | 151 |
| 8. | ಪತ್ರಿಕಾ ಬಿಡುಗಡೆ | - | 1422 |
| 9. | ವಿವಿಧ ಮಾಧ್ಯಮದ ಕಾರ್ಯಕ್ರಮ | - | 41 |
| 10. | ಮಹಿಳಾ ಸ್ವಾಸ್ಥ್ಯ ಸಂಘ | 4000 | 3886 |
| 11. | ಉಪಾಧ್ಯಾಯರುಗಳಿಗೆ ತರಬೇತಿ | 125 | 128 |
| 12. | ಸರ್ಕಾರೇತರ ಸಂಸ್ಥೆಗಳಿಗೆ ತರಬೇತಿ | 154 | — |

8. ಬಾಣಂತೀ ಸೇವಾ ಕಾರ್ಯಕ್ರಮ :

ಕರ್ನಾಟಕ ರಾಜ್ಯದಲ್ಲಿ ಈ ಕೆಳಕಂಡ 103 ವಿವಿಧ ಮಾದರಿಯ ಬಾಣಂತಿ ಸೇವಾ ಕೇಂದ್ರಗಳು ಕಾರ್ಯನಿರ್ವಹಿಸುತ್ತಲಿವೆ.

| | |
|---|---|
| 'ಎ' ಮಾದರಿ | 12 |
| 'ಬಿ' ಮಾದರಿ | 10 |
| 'ಸಿ' ಮಾದರಿ | 17 |
| ಉಪ ವಿಭಾಗ ಮಟ್ಟದ ಮಾದರಿ | 64 |

**9. ವೈದ್ಯಕೀಯ ಗರ್ಭಪಾತ :**

ವೈದ್ಯಕೀಯ ಗರ್ಭಪಾತ ಕಾಯ್ದೆಯನ್ನು 1971ರಲ್ಲಿ ಸಂಸತ್ತಿನಲ್ಲಿ ಅಂಗೀಕರಿಸಿ 1972ರಿಂದ ರಾಷ್ಟ್ರಾದ್ಯಂತ ಜಾರಿಗೆ ತರಲಾಯಿತು. ವೈದ್ಯಕೀಯ ಗರ್ಭಪಾತ ಸೇವೆಯನ್ನು ನೀಡಲು 471 ಕೇಂದ್ರಗಳನ್ನು ಗುರ್ತಿಸಿ ಮಾನ್ಯತೆ ನೀಡಿದೆ. ಇದರಲ್ಲಿ ಸರ್ಕಾರೀ ಸಂಸ್ಥೆಗಳು, ಖಾಸಗೀ ಆಸ್ಪತ್ರೆಗಳು ಮತ್ತು ನರ್ಸಿಂಗ್ ಹೋಂಗಳು ಸೇರಿವೆ. ಅಂದರೆ 325 ಸರ್ಕಾರೀ ಸಂಸ್ಥೆಗಳು 146 ಖಾಸಗೀ ಆಸ್ಪತ್ರೆ ಮತ್ತು ನರ್ಸಿಂಗ್ ಹೋಂಗಳು ಸೇರಿವೆ.

1993-94ನೇ ಸಾಲಿನಲ್ಲಿ 9077 ವೈದ್ಯಕೀಯ ಗರ್ಭಪಾತಗಳನ್ನು ಮಾಡಲಾಗಿದೆ. ಈ ಕಾರ್ಯಕ್ರಮದಲ್ಲಿ ಗುರಿಯನ್ನು ನಿಗಧಿ ಮಾಡಿರುವುದಿಲ್ಲ.

**10. ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ :**

ಮಕ್ಕಳು ಮತ್ತು ಗರ್ಭಿಣಿ ಸ್ತ್ರೀಯರು ಖಾಯಿಲೆಗಳಿಂದ ನರಳುವುದನ್ನು ಮತ್ತು ಮರಣ ಹೊಂದುವುದನ್ನು ಕಡಿಮೆ ಮಾಡುವ ಉದ್ದೇಶದಿಂದ ಸಾರ್ವತ್ರಿಕ ಲಸಿಕಾ ಕಾರ್ಯಕ್ರಮವನ್ನು ರಾಜ್ಯದಲ್ಲಿ 1989-90ನೇ ಸಾಲಿನಿಂದ ತರಲಾಯಿತು.

ಮಗುವಿಗೆ ಒಂದು ವರ್ಷ ತುಂಬುವುದರೊಳಗಾಗಿ ನೂರಕ್ಕೆ ನೂರರಷ್ಟು ಮೂರು ವರಸೆ ಡಿಪಿಟಿ ಮತ್ತು ಪೋಲಿಯೋ, ಒಂದು ವರಸೆ ಬಿಸಿಜಿ ಮತ್ತು ಒಂದು ವರ ಸೆ ದಢಾರ ಲಸಿಕೆಗಳನ್ನು ನೀಡುವ ಧ್ಯೇಯದಿಂದ, ಈ ಕಾರ್ಯಕ್ರಮವನ್ನು ರಾಜ್ಯದಲ್ಲಿ ಜಾರಿಗೊಳಿಸಲಾಗಿದೆ.

1993-94ನೇ ಸಾಲಿನಲ್ಲಿ ಈ ಕಾರ್ಯಕ್ರಮದಡಿಯಲ್ಲಿ ಆರು ಲಸಿಕೆಗಳಾದ ಡಿಪಿಟಿ, ಪೋಲಿಯೋ, ಬಿಸಿಜಿ ಮತ್ತು ದಢಾರ ವಿರುದ್ಧ ಲಸಿಕೆ ನೀಡುವ ಕಾರ್ಯಕ್ರಮದಲ್ಲಿ ವಾರ್ಷಿಕ ಗುರಿಯ ಶೇಕಡಾ ಕ್ರಮವಾಗಿ 90.3.54,93.50,101.73, 88.89 ಮತ್ತು 93.76 ರಷ್ಟು ಪ್ರಗತಿ ಸಾಧಿಸಿದೆ. 1993-94ನೇ ಸಾಲಿನ ವಾರ್ಷಿಕ ಗುರಿ ಹಾಗೂ ಸಾಧನೆಗಳ ವಿವರಗಳನ್ನು ಅನುಬಂಧ-1ರಲ್ಲಿ ಕೊಡಲಾಗಿದೆ.

**11. ಶಿಶು ಸಂರಕ್ಷಣೆ ಮತ್ತು ಸುರಕ್ಷಿತ ತಾಯ್ತನ ಕಾರ್ಯಕ್ರಮ :**

ಈ ಕಾರ್ಯಕ್ರಮವನ್ನು 1992-93ರಲ್ಲಿ ಈ ಕೆಳಗಿನ ಧ್ಯೇಯಗಳೊಂದಿಗೆ ಏಳು ಜಿಲ್ಲೆಗಳಲ್ಲಿ ಅಂದರೆ ಚಿಕ್ಕಮಗಳೂರು, ಬೆಂಗಳೂರು ಗ್ರಾಮಾಂತರ, ಬೆಂಗಳೂರು, ಕೋಲಾರ, ತುಮಕೂರು, ಶಿವಮೊಗ್ಗ ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ಜಾರಿಗೆ ತರಲಾಗಿದೆ.

1. ಶಿಶು ಮರಣ ದರವನ್ನು 2,000 ಇಸವಿಯ ವೇಳೆಗೆ 73ರಿಂದ 60ಕ್ಕೆ ಇಳಿಸುವುದು.
2. ಮಕ್ಕಳ ಮರಣ ದರವನ್ನು 2,000 ಇಸವಿಯ ವೇಳೆಗೆ 41ರಿಂದ 10 ಕ್ಕಿಂತ ಕಡಿಮೆ ಮಾಡುವುದು.
3. ತಾಯಿಯ ಮರಣ ದರವನ್ನು 2,000 ಇಸವಿಯ ವೇಳೆಗೆ ಪ್ರತಿ ಸಾವಿರಕ್ಕೆ 4 ರಿಂದ 2ಕ್ಕೆ ಇಳಿಸುವುದು.
4. 2,000 ಇಸವಿ ವೇಳೆಗೆ ಪೋಲಿಯೋ ನಿರ್ಮೂಲನೆ

5. 1995ನೇ ಇಸವಿ ವೇಳೆಗೆ ಬಾಣಂತಿಯರಿಗೆ ಬರಬಹುದಾದ ಧನುರ್ವಾಯು ರೋಗದ ನಿರ್ಮೂಲನೆ.

1993-94ನೇ ಸಾಲಿನಲ್ಲಿ ಈ ಕಾರ್ಯಕ್ರಮವನ್ನು ಜಾರಿಗೆ ತಂದಿರುವ 5 ಜಿಲ್ಲೆಗಳಲ್ಲಿ ವೈದ್ಯಾಧಿಕಾರರಿಗಳಿಗೆ ಮತ್ತು ಅರೆ ವೈದ್ಯಕೀಯ ಸಿಬ್ಬಂದಿಗೆ ತರಬೇತಿಯನ್ನು ಕೊಡಲಾಯಿತು. ತರಬೇತಿ ನೀಡಿದ ಜಿಲ್ಲಾವಾರು ವಿವರಗಳನ್ನು ಈ ಕೆಳಗೆ ಕೊಡಲಾಗಿದೆ.

| | ಜಿಲ್ಲೆ | ವೈದ್ಯಾಧಿಕಾರಿಗಳು | ಅರೆವೈದ್ಯಕೀಯ ಸಿಬ್ಬಂದಿ |
|---|---|---|---|
| 1. | ಬೆಂಗಳೂರು ನಗರ ಜಿಲ್ಲೆ | 86 | 312 |
| 2. | ಚಿತ್ರದುರ್ಗ | 182 | 542 |
| 3. | ಕೋಲಾರ | 155 | 620 |
| 4. | ಶಿವಮೊಗ್ಗ | 171 | 509 |
| 5. | ತುಮಕೂರು | 153 | 577 |

## 12. ತರಬೇತಿ ಕಾರ್ಯಕ್ರಮ :

### ಅ) ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ :

ರಾಜ್ಯದಲ್ಲಿ ಪ್ರತಿಯೊಂದು ಜಿಲ್ಲೆಗೆ ಒಂದರಂತೆ 19 ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಕೇಂದ್ರಗಳಿದ್ದು ಪ್ರತಿಯೊಂದು ಕೇಂದ್ರದಲ್ಲಿ 30 ಅಭ್ಯರ್ಥಿಗಳಿಗೆ ತರಬೇತಿ ನೀಡುವ ಅವಕಾಶವಿದೆ. 1993-94ನೇ ಸಾಲಿನಲ್ಲಿ 560 ಅಭ್ಯರ್ಥಿಗಳಿಗೆ ತರಬೇತಿ ನೀಡಲಾಯಿತು.

### ಆ) ಹಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ :

ನಾಲ್ಕು ತರಬೇತಿ ಕೇಂದ್ರಗಳು ಬೆಂಗಳೂರು, ಮಂಗಳೂರು, ಬೆಳಗಾಂ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು ಕೆಲಸದಲ್ಲಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ಮುಂದೆ ಹಿರಿಯ ಮಹಿಳಾ ಆರೋಗ್ಯ ಸಹಾಯಕಿಯರಾಗಿ ಬಡ್ತಿ ಹೊಂದಲು ಅನುಕೂಲವಾಗುವಂತೆ ತರಬೇತಿಯನ್ನು ನೀಡುತ್ತಿದೆ. ಪ್ರತಿ ಕೇಂದ್ರದಲ್ಲಿ 30 ಅಭ್ಯರ್ಥಿಗಳಿಗೆ ತರಬೇತಿ ನೀಡುವ ಅವಕಾಶವಿದೆ. 1993-94ನೇ ಸಾಲಿನಲ್ಲಿ 120 ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡಲಾಯಿತು.

### ಅ) ದಾದಿಯರ ತರಬೇತಿ :

ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಉಪಕೇಂದ್ರಗಳಲ್ಲಿ ಸ್ಥಳೀಯ ದಾದಿಯರಿಗೆ ಪ್ರತಿ ಅಭ್ಯರ್ಥಿಗೆ ಪ್ರತಿ ತಿಂಗಳಿಗೆ 300 ರೂ.ಗಳ ಶಿಷ್ಯ ವೇತನ ನೀಡಿ 30ದಿನಗಳ ತರಬೇತಿಯನ್ನು ನೀಡಲಾಗುತ್ತಿದೆ. ತರಬೇತಿಯ ನಂತರ ಪ್ರತಿಯೊಬ್ಬ ದಾದಿಯರಿಗೆ ಹೆರಿಗೆ ಸಲಕರಣೆಗಳುಳ್ಳ ಕೈಪೆಟ್ಟಿಗೆಯನ್ನು ಕೊಟ್ಟು ಪ್ರತಿಯೊಂದು ಹೆರಿಗೆಗೆ 3.00 ರೂ.ಗಳಂತೆ

ಕೊಡಲಾಗುತ್ತಿದೆ. 1993-94ನೇ ಸಾಲಿನಲ್ಲಿ 1750 ದಾದಿಯರಿಗೆ ತರಬೇತಿ ಕೊಡುವ ಗುರಿ ಹೊಂದಿದ್ದು ಇದರಲ್ಲಿ 1772 ದಾದಿಯರಿಗೆ ತರಬೇತಿ ನೀಡಲಾಗಿದೆ.

**ಈ) ಕ್ರಾಷ್ ತರಬೇತಿ ಕಾರ್ಯಕ್ರಮ :**

ಹಿರಿಯ ಮತ್ತು ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ಜಿಲ್ಲಾಮಟ್ಟದ ಬಾಣಂತಿ ಸೇವಾ ಕೇಂದ್ರದಲ್ಲಿ ವಂಕಿ ಧಾರಣೆ ತಂತ್ರಜ್ಞಾನದ ಬಗ್ಗೆ ತರಬೇತಿ ನೀಡಲಾಗಿದೆ.

**ಉ) ವೈದ್ಯಕೀಯ ಗರ್ಭಪಾತ ತರಬೇತಿ :**

ವಿವಿಧ ಆಸ್ಪತ್ರೆಗಳು, ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು ಪ್ರಾಥಮಿಕ ಆರೋಗ್ಯ ಘಟಕಗಳಲ್ಲಿ ಕೆಲಸ ಮಾಡುವ ವೈದ್ಯರುಗಳಿಗೆ ಬೋಧಕ ಸಂಸ್ಥೆಗಳಿಗೆ ಸೇರಿದ 10 ತರಬೇತಿ ಸಂಸ್ಥೆಗಳಲ್ಲಿ ವೈದ್ಯಕೀಯ ಗರ್ಭಪಾತದ ಬಗ್ಗೆ 30 ದಿನಗಳ ಕಾಲ ತರಬೇತಿಯನ್ನು ನೀಡಲಾಗುತ್ತಿದೆ. 1993-94ನೇ ಸಾಲಿನಲ್ಲಿ 24 ವೈದ್ಯರುಗಳಿಗೆ ತರಬೇತಿ ನೀಡಲಾಗಿದೆ.

**ಊ) ಉದರ ದರ್ಶಕ ಶಸ್ತ್ರ ಚಿಕಿತ್ಸೆ :**

ಬೆಂಗಳೂರಿನ ವಾಣಿವಿಲಾಸ್ ಆಸ್ಪತ್ರೆ, ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ ಆಸ್ಪತ್ರೆ, ಹುಬ್ಬಳ್ಳಿ, ಕಸ್ತೂರ್ ಬಾ ವೈದ್ಯಕೀಯ ಮಹಾ ವಿದ್ಯಾಲಯ ಮಣಿಪಾಲ, ಜಿಲ್ಲಾ ಆಸ್ಪತ್ರೆ, ಬೆಳಗಾಂ ಮತ್ತು ಗುಲ್ಬರ್ಗಾದಲ್ಲಿ ಸ್ತ್ರೀರೋಗ ಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಡಿಪ್ಲೋಮಾ ಹೊಂದಿರುವ ವೈದ್ಯರು ಹಾಗೂ ಒಬ್ಬ ಶಸ್ತ್ರಚಿಕಿತ್ಸೆಯ ಶುಶ್ರೂಷಕಿ ಮತ್ತು ಒಬ್ಬ ಶಸ್ತ್ರಚಿಕಿತ್ಸೆಯ ಸಹಾಯಕಿಯರಿಗೆ 45 ದಿನಗಳ ಕಾಲ ತರಬೇತಿಯನ್ನು ನೀಡಲಾಗುತ್ತಿದೆ. 1993-94ನೇ ಸಾಲಿನಲ್ಲಿ 20 ವೈದ್ಯರಿಗೆ ತರಬೇತಿಯನ್ನು ನೀಡಲಾಗಿದೆ.

**ಋ) ಸಂಕ್ಷಿಪ್ತ ಸಾಮಾನ್ಯ ಶುಶ್ರೂಷಾ ತರಬೇತಿ (ಸಿಜಿಎನ್) :**

ಮಹಿಳಾ ಆರೋಗ್ಯ ಸಂದರ್ಶಕಿಯರಿಗೆ ಸಂಕ್ಷಿಪ್ತ ಸಾಮಾನ್ಯ ಶುಶ್ರೂಷಕ ತರಬೇತಿಯನ್ನು ಚಿತ್ರದುರ್ಗ ಮತ್ತು ಧಾರವಾಡ ಜಿಲ್ಲಾ ಆಸ್ಪತ್ರೆಗಳಲ್ಲಿ ಆರು ತಿಂಗಳಕಾಲ ನೀಡಲಾಗುತ್ತಿದೆ. ಪ್ರತಿ ಜಿಲ್ಲೆಯಲ್ಲಿ 30 ಅಭ್ಯರ್ಥಿಗಳಿಗೆ ತರಬೇತಿ ನೀಡುವ ಅವಕಾಶವಿದ್ದು 1993-94ನೇ ಸಾಲಿನಲ್ಲಿ 17 ಅಭ್ಯರ್ಥಿಗಳಿಗೆ ತರಬೇತಿ ನೀಡಲಾಗಿದೆ.

**ೠ) ಅನುದಾನ ನೀಡಿಕೆ ಮತ್ತು ಖರ್ಚು ವಿವರಗಳನ್ನು ಅನುಬಂಧ 2 ರಲ್ಲಿ ಕೊಡಲಾಗಿದೆ.**

# ಅನುಬಂಧ - 1

## ರಾಷ್ಟ್ರೀಯ ಕುಟುಂಬಕಲ್ಯಾಣ ಕಾರ್ಯಕ್ರಮ

| | 1991-92 | | | 1992-93 | | | 1993-94 | | |
|---|---|---|---|---|---|---|---|---|---|
| | ಗುರಿ | ಸಾಧನೆ | ಶೇ | ಗುರಿ | ಸಾಧನೆ | ಶೇ | ಗುರಿ | ಸಾಧನೆ | ಶೇ. |
| **1. ಕುಟುಂಬಕಲ್ಯಾಣ ಕಾರ್ಯಕ್ರಮ** | | | | | | | | | |
| 1. ಸಂತಾನಹರಣ ಶಸ್ತ್ರಚಿಕಿತ್ಸೆ | 345000 | 301035 | 87.3 | 360000 | 331554 | 92.0 | 380000 | 356305 | 93.8 |
| 2. ವಂಕಿ ಅಳವಡಿಕೆ | 275000 | 232258 | 84.5 | 290000 | 237820 | 82.0 | 300000 | 274998 | 91.7 |
| 3. ನಿರೋಧ್ ಬಳಕೆದಾರರು | 270000 | 251274 | 93.1 | 280000 | 265022 | 94.6 | 357000 | 317854 | 89.0 |
| 4. ನುಂಗುವ ಮಾತ್ರೆ ಬಳಕೆದಾರರು | 80000 | 82304 | 102.9 | 112000 | 81561 | 72.8 | 140000 | 107495 | 76.8 |
| **2. ಲಸಿಕಾ ಕಾರ್ಯಕ್ರಮ** | | | | | | | | | |
| 1. ಡಿ.ಪಿ.ಟಿ | 1148400 | 1065616 | 92.8 | 1185800 | 1088063 | 91.7 | 1229367 | 1149909 | 93.5 |
| 2. ಪೋಲಿಯೋ | 1148400 | 1067386 | 92.9 | 1185800 | 1091043 | 92.0 | 1229367 | 1149445 | 93.5 |
| 3. ಬಿ.ಸಿ.ಜಿ | 1148400 | 1133730 | 98.7 | 1185800 | 1189461 | 100.3 | 1229367 | 1250681 | 101.5 |
| 4. ದಢಾರ | 1148400 | 970836 | 84.5 | 1185800 | 1013485 | 85.5 | 1229367 | 1092823 | 88.9 |
| 5. ಡಿ.ಟಿ | 897500 | 872120 | 97.2 | 95000 | 956344 | 100.7 | 1169400 | 991346 | 84.7 |
| 6. ಟಿ.ಟಿ. ಗರ್ಭಿಣಿಯರು | 1248700 | 1183935 | 94.8 | 1275100 | 1216273 | 95.4 | 1358345 | 1273572 | 93.8 |
| 7. ಟಿ.ಟಿ.(10 ವರ್ಷ) | 801600 | 645557 | 80.5 | 856000 | 733897 | 85.7 | 1179800 | 837536 | 70.9 |
| 8. ಟಿ.ಟಿ.(16 ವರ್ಷ) | 801600 | 430033 | 53.5 | 856000 | 499376 | 58.4 | 1082100 | 584724 | 54.0 |

## ಅನುಬಂಧ - 2

# ಲೆಕ್ಕ ಶೀರ್ಷಿಕೆ 2211 ಮತ್ತು 4211.00 ಕುಟುಂಬ ಕಲ್ಯಾಣದ ಅಡಿಯಲ್ಲಿ 1993-94ನೇ ಸಾಲಿನಲ್ಲಿ ನಿಗದಿಯಾದ ಅನುದಾನ ಮತ್ತು ಖರ್ಚಿನ ವಿವರಗಳು

| ಕ್ರ ಸಂ | ಯೋಜನೆ | 1993-94ನೇ ಸಾಲಿಗೆ ನಿಗದಿಯಾದ ಅನುದಾನ | 1993-94ನೇ ಸಾಲಿನ ಖರ್ಚು ಎಂ.ಎಂ.ಆರ್. ಪ್ರಕಾರ (ಅಂದಾಜು) |
|---|---|---|---|
| *1.* | ***ಕೇಂದ್ರೀಯ ಅನುದಾನ ಯೋಜನೆಗಳು*** | | |
| 1. | ನಿರ್ದೇಶನ ಮತ್ತು ಆಡಳಿತ | 333.43 | 307.99 |
| 2. | ಗ್ರಾಮೀಣ ಕುಟುಂಬ ಕಲ್ಯಾಣ ಸೇವೆಗಳು | 2024.09 | 2134.34 |
| 3. | ನಗರ ಕುಟುಂಬ ಕಲ್ಯಾಣ ಸೇವೆಗಳು | 354.52 | 125.54 |
| 4. | ಹೆರಿಗೆ ಮತ್ತು ಮಕ್ಕಳ ಆರೋಗ್ಯ | 357.00 | 357.00 |
| 5. | ಸಾರಿಗೆ | 209.29 | 126.75 |
| 6. | ಪ್ರೋತ್ಸಾಹ ಧನ | 891.00 | 522.86 |
| 7. | ಇತರೇ ಸೇವೆ ಮತ್ತು ಸರಬರಾಜು | 540.50 | 450 |
| 8. | ಸಾಮೂಹಿಕ ಶಿಕ್ಷಣ ಮಾಧ್ಯಮ | 63.50 | 50.00 |
| 9. | ತರಬೇತಿ | 202.44 | 164.00 |
| 10. | ಭಾರತೀಯ ಜನಸಂಖ್ಯಾ ಯೋಜನೆ - 8 | - | - |
| 11. | ಭಾರತೀಯ ಜನಸಂಖ್ಯಾ ಯೋಜನೆ- 9 | - | - |
| | ಒಟ್ಟು | **4975-77** | **4238-58** |
| 2. | **ರಾಜ್ಯ ಯೋಜನೆಯ ಯೋಜನೆಗಳು** | | |
| 1. | ಗಣಕ ಯಂತ್ರದ ನಿರ್ವಹಣೆ | 4.00 | 2.43 |
| 2. | ಸುರಕ್ಷಿತ ತಾಯ್ತನ ಮತ್ತು ಶಿಶು ಉಳಿಯುವಿಕೆ | 3.00 | 3.00 |
| 3. | ಉಪಯೋಗಿಸಿಬಿಡಬಹುದಾದ ಹೆರಿಗೆ ಪೆಟ್ಟಿಗೆಗಳು | 10.00 | 10.00 |
| 4. | ಲಾಟರಿ ಯೋಜನೆ | 36.00 | 12.03 |
| 5. | ವಿಮಾ ಯೋಜನೆ | 140.77 | 130.14 |
| 6. | ರಾಷ್ಟ್ರೀಯ ಜಿಲ್ಲಾ ಔಷಧ-ಮಳಿಗೆಯಿಂದ ಲಸಿಕೆ ಸಾರಿಗೆ ವೆಚ್ಚ | 2.00 | 1.50 |
| 7. | ಸಮುದಾಯ ಬಹುಮಾನಗಳು | 3.00 | - |

| | | | |
|---|---|---|---|
| 8. | ಕುಟುಂಬ ಕಲ್ಯಾಣ ಕಾರ್ಯಕ್ರಮದಲ್ಲಿ ಔಷಧ ಸರಬರಾಜು | 60.23 | 50.00 |
| 9. | ಭಾರತೀಯ ಜನಸಂಖ್ಯಾ ಯೋಜನೆ-3 | 79.00 | 50.00 |
| 10. | ಸಲಕರಣೆಗಳ ನಿರ್ವಹಣೆ | - | - |
| 11. | ಪ್ರಾಥಮಿಕ ಆರೋಗ್ಯ ಕೇಂದ್ರದ ಮಟ್ಟದಲ್ಲಿ ಹೆರಿಗೆ ಮತ್ತು ಮಗುವಿನ ಆರೋಗ್ಯ ಆರೈಕೆ | - | - |
| | **ಮೊತ್ತ** | **338.00** | **259.10** |
| 3. | ರಾಜ್ಯಧನ (ಯೋಜನೇತರ) | | |
| 12. | ಭಾರತೀಯ ಜನಸಂಖ್ಯಾ ಯೋಜನೆ (ಯೋಜನೇತರ) | 450.76 | 300.85 |
| | **ಲೆಕ್ಕ ಶೀರ್ಷಿಕೆ 2211 ಮೊತ್ತ** | **5764.53** | **4798.53** |
| 4. | ಕಟ್ಟಡಗಳು ಲೆಕ್ಕ ಶೀರ್ಷಿಕೆ 4211.......... | - | - |
| | **ಒಟ್ಟು ಮೊತ್ತ** | **5764.53** | **4798.53** |

## ಅನುಬಂಧ - 3

## ಕರ್ನಾಟಕ ರಾಜ್ಯದಲ್ಲಿ ವಿವಿಧ ಕುಟುಂಬ ಕಲ್ಯಾಣ ಯೋಜನೆಯ ವಿಧಾನದಿಂದ ರಕ್ಷಣೆಗೆ ಒಳಗಾದ ಅರ್ಹ ದಂಪತಿಗಳ ಜಿಲ್ಲಾವಾರು ಶೇಕಡಾ ಪ್ರಮಾಣ

| ಕ್ರ ಸಂ | ಜಿಲ್ಲೆ | 31-3-89 ರಲ್ಲಿದ್ದಂತೆ | 31-3-90 ರಲ್ಲಿದ್ದಂತೆ | 31-3-91 ರಲ್ಲಿದ್ದಂತೆ | 31-3-92 ರಲ್ಲಿದ್ದಂತೆ | 31-3-93 ರಲ್ಲಿದ್ದಂತೆ | ಸಂತಾನ ಹರಣ ಶಸ್ತ್ರ ಚಿಕಿತ್ಸೆಯ ಅರ್ಹ ದಂಪತಿಯ ರಕ್ಷಣಾ ದರದಂತೆ ಜನನದರ |
|---|---|---|---|---|---|---|---|
| 1. | ಬೆಂಗಳೂರು (ನಗರ) | 47.6 | 48.6 | 45.9 | 46.89 | 47.95 | 26.54 |
| 2. | ಬೆಂಗಳೂರು (ಗ್ರಾ) | 46.5 | 46.9 | 50.5 | 52.45 | 56.10 | 23.96 |
| 3. | ಚಿತ್ರದುರ್ಗ | 47.5 | 47.2 | 48.8 | 50.26 | 50.67 | 25.14 |
| 4. | ಕೋಲಾರ | 45.6 | 45.6 | 48.6 | 51.26 | 52.00 | 25.26 |
| 5. | ಶಿವಮೊಗ್ಗ | 48.3 | 49.9 | 56.3 | 57.82 | 58.98 | 22.80 |
| 6. | ತುಮಕೂರು | 46.1 | 47.1 | 50.3 | 50.06 | 51.36 | 25.67 |
| 7. | ಬೆಳಗಾಂ | 40.9 | 41.6 | 45.6 | 47.84 | 47.99 | 25.62 |
| 8. | ಬಿಜಾಪುರ | 35.9 | 38.4 | 45.5 | 46.41 | 45.87 | 27.78 |
| 9. | ಧಾರವಾಡ | 41.1 | 41.7 | 45.5 | 47.52 | 49.10 | 25.66 |
| 10. | ಉತ್ತರ ಕನ್ನಡ | 35.7 | 36.4 | 40.1 | 41.56 | 42.62 | 28.84 |
| 11. | ಬಳ್ಳಾರಿ | 38.5 | 39.1 | 39.3 | 40.29 | 41.33 | 28.28 |
| 12. | ಬೀದರ್ | 42.5 | 43.6 | 45.0 | 46.87 | 47.62 | 26.91 |
| 13. | ಗುಲ್ಬರ್ಗಾ | 30.0 | 30.4 | 31.0 | 32.81 | 35.84 | 31.13 |
| 14. | ರಾಯಚೂರು | 35.1 | 36.3 | 34.7 | 35.88 | 37.13 | 30.62 |

| | | | | | | | |
|---|---|---|---|---|---|---|---|
| 15. | ಚಿಕ್ಕಮಗಳೂರು | 54.8 | 56.1 | 64.3 | 65.87 | 66.13 | 20.14 |
| 16. | ದಕ್ಷಿಣ ಕನ್ನಡ | 33.6 | 34.7 | 40.4 | 41.86 | 43.06 | 28.06 |
| 17. | ಹಾಸನ | 55.6 | 57.1 | 63.8 | 64.78 | 66.56 | 20.18 |
| 18. | ಕೊಡಗು | 51.7 | 51.7 | 60.9 | 62.92 | 63.36 | 21.84 |
| 19. | ಮಂಡ್ಯ | 55.3 | 56.5 | 63.7 | 65.59 | 68.47 | 19.44 |
| 20. | ಮೈಸೂರು | 54.4 | 56.2 | 60.2 | 63.04 | 63.52 | 21.68 |
| | ಒಟ್ಟು ಮೊತ್ತ | 43.6 | 44.5 | 47.6 | 49.13 | 50.25 | 25.72 |

**ಟಿಪ್ಪಣಿ :** ಶಸ್ತ್ರಚಿಕಿತ್ಸೆಯ ಅರ್ಹದಂಪತಿ ರಕ್ಷಣಾ ಪ್ರಮಾಣವನ್ನು ಅವಲಂಬಿಸಿ ಲೆಕ್ಕಾಚಾರ ಹಾಕಿರುವ ಜನನ ದರವು ಮಾದರಿ ದಾಖಲಾತಿ ಸಮೀಕ್ಷೆಯಲ್ಲಿ (ಎಸ್.ಆರ್.ಎಸ್) ಲೆಕ್ಕಾಚಾರ ಹಾಕಿರುವ ಜನನ ದರದೊಡನೆ ಸರಿ ಹೊಂದುವುದರಿಂದ ಇದನ್ನು ಗಣನೆಗೆ ತೆಗೆದುಕೊಳ್ಳಬಹುದು.ಅರ್ಹ ದಂಪತಿಗಳ ರಕ್ಷಣಾ ಪ್ರಮಾಣವನ್ನು ಗಣನೆಗೆ ತೆಗೆದುಕೊಂಡು ಜನನ ದರ ಲೆಕ್ಕಾಚಾರ ಹಾಕಲಾಗಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಯ ಜನನ ದರವು ಹೆಚ್ಚಿಗೆ ಇರುತ್ತದೆ. ಆದರೆ ವಾಸ್ತವಿಕತೆಯಲ್ಲಿ ಅಧ್ಯಯನದ ವರದಿ ಪ್ರಕಾರ ಇವೆರಡು ಜಿಲ್ಲೆಯ ಜನನ ದರವು ಕಡಿಮೆ ಇರುತ್ತದೆ. ಅಂದರೆ ದಕ್ಷಿಣ ಕನ್ನಡ ಜಿಲ್ಲೆಯ ಜನನ ದರವು 23.0 (1987) ಮತ್ತು ಉತ್ತರ ಕನ್ನಡ ಜಿಲ್ಲೆಯ ಜನನ ದರವು 22.1 (1991) ಇರುತ್ತದೆ.

## ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ :

1. ಪೀಠಿಕೆ : ಈ ರಾಜ್ಯದಲ್ಲಿ ಕುಷ್ಠರೋಗವು ಒಂದು ದೊಡ್ಡ ಸಾಮಾಜಿಕ ಮತ್ತು ಸಾರ್ವಜನಿಕ ಆರೋಗ್ಯ ಸಮಸ್ಯೆಯಾಗಿದೆ. ಈಗಿನ ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ 1954-55ರಲ್ಲಿ ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮವಾಗಿ ಪ್ರಾರಂಭಿಸಲ್ಪಟ್ಟಿತ್ತು. ಈ ಕಾರ್ಯಕ್ರಮದ ಮುಖ್ಯ ಉದ್ದೇಶವು, ರೋಗಿಗಳನ್ನು ಪ್ರಾರಂಭದಲ್ಲಿಯೇ ಪತ್ತೆ ಹಚ್ಚುವುದು, ಹಾಗೂ ಎಲ್ಲಾ ರೋಗಿಗಳಿಗೂ ಕ್ರಮ ಬದ್ಧವಾಗಿ ಡ್ಯಾಪ್‌ಸೋನ್ ಮಾತ್ರೆಗಳಿಂದ ಚಿಕಿತ್ಸೆ ನೀಡುವುದು. ಈ ರೀತಿ ಮಾಡಲಾಗಿ ಕಾರ್ಯಕ್ರಮದಲ್ಲಿ ಅಡಚಣೆಗಳುಂಟಾದವು. ಅದೆಂದರೆ ಚಿಕಿತ್ಸೆಯು ದೀರ್ಘಕಾಲವಾದುದರಿಂದ ಕ್ರಮ ತಪ್ಪಿದ ಚಿಕಿತ್ಸೆಯಾಗಿ ಔಷಧ ನಿರೋಧ ಸ್ಥಿತಿ ತಲುಪಿತು. (ಡ್ರಗ್ ರೆಸಿಸ್ಟೆಂಸ್)

   ಈ ಅಡಚಣೆಗಳನ್ನು ಹೋಗಲಾಡಿಸಲು ಒಂದು ಸಾವಿರ ಜನಸಂಖ್ಯೆಗೆ ಐದು ಕುಷ್ಠ ರೋಗಿಗಳಿರುವ ಜಿಲ್ಲೆಗಳಲ್ಲಿ ಭಾರತ ಸರ್ಕಾರದ ಆದೇಶದ ಮೇರೆಗೆ 1982ರಿಂದ 'ಬಹು ಔಷಧಿ ಚಿಕಿತ್ಸಾ ಕಾರ್ಯಕ್ರಮವನ್ನು' ಜಾರಿಗೆ ತರಲಾಯಿತು.

## 2. ಮುಖ್ಯ ಉದ್ದೇಶಗಳು

2.1 ಸೋಂಕುಳ್ಳ ರೋಗಿಗಳನ್ನು ಅತಿ ಕಡಿಮೆ ಅವಧಿಯಲ್ಲಿ ಸೋಂಕಿಲ್ಲದಂತೆ ಮಾಡುವುದು.

2.2 ಪ್ರಾರಂಭದಲ್ಲಿಯೇ ರೋಗಿಗಳನ್ನು ಪತ್ತೆ ಹಚ್ಚಿ ಕ್ರಮಬದ್ಧ ಚಿಕಿತ್ಸೆಯಿಂದ ಅಂಗವಿಕಲತೆಯನ್ನು ತಡೆಗಟ್ಟುವುದು.

2.3 ಸಮಾಜ, ಕುಟುಂಬ ಹಾಗೂ ವ್ಯಕ್ತಿಗೆ ಆರೋಗ್ಯ ಶಿಕ್ಷಣದ ಮೂಲಕ ಈ ರೋಗದ ಬಗ್ಗೆ ಇದ್ದ ತಪ್ಪು ಕಲ್ಪನೆಯನ್ನು ಹೋಗಲಾಡಿಸಿ ರೋಗದ ಬಗ್ಗೆ ಸರಿಯಾದ ಮಾಹಿತಿ ನೀಡುವುದು.

2.4 ಗುಣ ಹೊಂದಿದ ಕುಷ್ಠರೋಗಿಗಳಿಗೆ ಪುನರ್ವಸತಿ ಕಲ್ಪಿಸುವುದು.

2.5 ಕ್ರಿ.ಶ. 2000 ಇಸವಿಗೆ ಎಲ್ಲಾ ರೋಗಿಗಳನ್ನು ರೋಗದಿಂದ ವಿಮುಕ್ತಿಗೊಳಿಸುವುದು.

**3. ಗುರಿಯನ್ನು ಸಾಧಿಸಲು ಅನುಸರಿಸಿದ ಕ್ರಮಗಳು :**

3.1 ರೋಗಿಗಳನ್ನು ಪತ್ತೆ ಹಚ್ಚುವುದು.

ರೋಗಿಗಳನ್ನು ಪತ್ತೆ ಹಚ್ಚಲು ತಪಶೀಲುವಾರು ಸಮೀಕ್ಷೆ, ಶಾಲಾ ಮಕ್ಕಳ ಸಮೀಕ್ಷೆ ರೋಗಿಗಳ ಸಂಪರ್ಕಗಳ ಸಮೀಕ್ಷೆ, ತೀವ್ರ ಸಮೀಕ್ಷೆಗಳಿಂದ ಕಾಲಮಿತಿ ಅವಧಿಯಲ್ಲಿ ರೋಗಿಗಳನ್ನು ಪತ್ತೆ ಹಚ್ಚುವುದು.

3.2 ಕುಷ್ಠರೋಗದ ಬಗ್ಗೆ ಸರಿಯಾದ ಮಾಹಿತಿ ಮತ್ತು ಶಿಕ್ಷಣ ನೀಡುವುದರಿಂದ ಸ್ವಯಂ ಪ್ರೇರಣೆಯಿಂದ ಬಂದು ನೋಂದಾಯಿಸಿಕೊಳ್ಳುತ್ತಾರೆ.

**4. ಚಿಕಿತ್ಸೆ :**

ಪತ್ತೆ ಹಚ್ಚಿದ ಎಲ್ಲಾ ರೋಗಿಗಳಿಗೂ ಅಲ್ಪಾವಧಿಯಲ್ಲಿ ಕ್ರಮಬದ್ಧ ಚಿಕಿತ್ಸೆ ನೀಡುವುದು.

**5. ರೋಗಿಯ ಚಿಕಿತ್ಸಾ ಕ್ರಮಬದ್ಧತೆ :**

ರೋಗಿಯು ಚಿಕಿತ್ಸೆ ಪಡೆಯುವ ಮುನ್ನಾ ಚಿಕಿತ್ಸಾ ಕೇಂದ್ರಕ್ಕೆ ಬರಲು ಆರೋಗ್ಯ ಶಿಕ್ಷಣ ನೀಡಿ ಮನವೊಲಿಸುವುದು.

**5.1 ಮೇಲ್ವಿಚಾರಣೆ :**

ರೋಗಿಯು ಔಷಧಿಯನ್ನುಕ್ರಮವಾಗಿ ತೆಗೆದುಕೊಳ್ಳುತ್ತಿರುವ ಬಗ್ಗೆ ಖಚಿತ ಪಡಿಸಿಕೊಳ್ಳಲು, ಆಗಾಗ ಮೂತ್ರ ಪರೀಕ್ಷೆ ಮಾಡುವುದು, ಕ್ರಮ ತಪ್ಪಿದಲ್ಲಿ ಆರೋಗ್ಯ ಶಿಕ್ಷಣ ನೀಡಿ ಕ್ರಮಬದ್ಧವಾಗಿ ಚಿಕಿತ್ಸೆ ತೆಗೆದುಕೊಳ್ಳಲು ಪ್ರೇರೇಪಿಸುವುದು.

**5.2 ಕ್ರಮಬದ್ಧ ಚಿಕಿತ್ಸೆ ಹೊಂದಿದವರ ಅನುಸರಣಾ ಕ್ರಮ :**

ಆರೋಗ್ಯ ಕಾರ್ಯಕರ್ತರಿಂದ ನೇರ ಚಟುವಟಿಕೆಗಳು, ಪತ್ರ ವ್ಯವಹಾರ ಹಾಗೂ ಸ್ವಯಂಸೇವಾ ಸಂಸ್ಥೆಗಳ ಮೂಲಕ ಕ್ರಮಬದ್ಧ ಚಿಕಿತ್ಸೆ ಹೊಂದಲು ಮನವೊಲಿಸುವುದು.

## ಕರ್ನಾಟಕ

ಕರ್ನಾಟಕವನ್ನು ಕಡಿಮೆ ಸಾಂದ್ರತೆಯ ಸೋಂಕುಳ್ಳ ರಾಜ್ಯವೆಂದು ಪರಿಗಣಿಸಲಾಗಿದೆ. 1986 ರಿಂದ 31-3-94 ರವರೆಗೆ ಬಹು ಔಷಧಿ ಚಿಕಿತ್ಸೆಯಿಂದ 2,78,133 ರೋಗಿಗಳನ್ನು ಗುಣಪಡಿಸಲಾಗಿದೆ. ಹಾಗೂ ಹಾಲಿ 24,522 ರೋಗಿಗಳು ಚಿಕಿತ್ಸೆ ಪಡೆಯುತ್ತಿದ್ದಾರೆ.

1. ಕರ್ನಾಟಕ ರಾಜ್ಯದಲ್ಲಿ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮದಡಿ ಸಿಬ್ಬಂದಿ ವರ್ಗದ ವಿವರಗಳು ಕೆಳಕಂಡಂತಿವೆ.

| | | |
|---|---|---|
| ಜಂಟಿ ನಿರ್ದೇಶಕರು, ಕುಷ್ಠರೋಗ ಸಾಂಕ್ರಾಮಿಕ ಸಮೀಕ್ಷಾ ತಂಡ | - | 1 |
| ಮಾದರಿ ಮೌಲ್ಯಮಾಪನ ಘಟಕ | - | 4 |
| ಜಿಲ್ಲಾ ಕುಷ್ಠರೋಗ ಅಧಿಕಾರಿಗಳು | - | 20 |
| ರಾಷ್ಟ್ರೀಯ ಕುಷ್ಟರೋಗ ನಿಯಂತ್ರಣ ಕೇಂದ್ರಗಳು | | 31 |
| ಮಾರ್ಸಾಡಿತ ಕುಷ್ಠರೋಗ ಕೇಂದ್ರಗಳು | | 14 |
| ನಗರ ಕುಷ್ಠ ರೋಗ ಕೇಂದ್ರಗಳು | | 49 |
| ಸಮೀಕ್ಷೆ, ಶಿಕ್ಷಣ ಹಾಗೂ ಚಿಕಿತ್ಸಾ ಘಟಕಗಳು | - | 677 |
| ತಾತ್ಕಾಲಿಕ ಶುಶ್ರೂಷಾ ವಾರ್ಡ್‌ಗಳು | | 30 |
| ಕುಷ್ಠರೋಗ ತರಬೇತಿ ಕೇಂದ್ರಗಳು | - | 2 |
| ಕುಷ್ಠರೋಗ ಪುನರ್ವಸತಿ ಹಾಗೂ ಅಭಿವೃದ್ಧಿ ಕೇಂದ್ರ | - | 2 |

ಇದರ ಜೊತೆಗೆ 26 ಸ್ವಯಂಸೇವಾ ಸಂಸ್ಥೆಗಳು ಕುಷ್ಠರೋಗ ನಿರ್ಮೂಲನೆಗಾಗಿ ಕೆಲಸ ಮಾಡುತ್ತಿವೆ. ಇದರೊಂದಿಗೆ ರೋಗಿಗಳಿಗೆ, 1,110 ಹಾಸಿಗಗಳ ಸೌಲಭ್ಯವಿದ್ದು, 410 ಹಾಸಿಗೆಗಳನ್ನು ಸ್ವಯಂ ಸೇವಾ ಸಂಸ್ಥೆಯವರು ಭಾರತ ಸರ್ಕಾರದ ಅನುದಾನದಿಂದ ನಡೆಸುತ್ತಿದ್ದಾರೆ. ದೊಡ್ಡವರಿಗೆ ಒಂದು ಹಾಸಿಗೆಗೆ ಒಂದು ತಿಂಗಳಿಗೆ ರೂ. 185.00 ಹಾಗೂ ಮಕ್ಕಳಿಗೆ ರೂ.90 ರಂತೆ ಅನುದಾನವನ್ನು ನೀಡಲಾಗುತ್ತಿದೆ.

**2. 93-94ನೇ ಸಾಲಿನ ವಾರ್ಷಿಕ ಗುರಿ ಮತ್ತು ಸಾಧನೆ**

| | | ಗುರಿ. | ಸಾಧನೆ | ಶೇಕಡಾವಾರು |
|---|---|---|---|---|
| 2.1 | ಪತ್ತೆ ಹಚ್ಚಿದ ಹೊಸರೋಗಿಗಳ ಸಂಖ್ಯೆ | 20.000 | 26,465 | 136.32 |
| 2.2 | ಗುಣ ಹೊಂದಿದವರು | 40,000 | 30,462 | 76.16 |

**3. ಬಹು ಔಷಧ ಚಿಕಿತ್ಸೆ**

1986 ರಿಂದ 1992 ರವರೆಗೆ ಆದ್ಯತೆಯ ಮೇರೆಗೆ ಬಹು ಔಷಧಿಗಳ ಚಿಕಿತ್ಸಾ ಕಾರ್ಯಕ್ರಮವನ್ನು ವ್ಯವಸ್ಥಿತವಾಗಿ 10 ಜಿಲ್ಲೆಗಳಲ್ಲಿ ನಡೆಸಲಾಗುತ್ತಿದೆ.

ಪ್ರಾರಂಭದ ಹಂತದಲ್ಲಿ ರೋಗಿಗಳನ್ನು ಪತ್ತೆ ಹಚ್ಚಿ, ಕ್ರಮಬದ್ಧ ಚಿಕಿತ್ಸೆ ಮತ್ತು ಔಷಧಿಯನ್ನು ಸ್ವಯಂ ಪ್ರೇರಣೆಯಿಂದ ತೆಗೆದುಕೊಳ್ಳುವುದು,ಚಿಕಿತ್ಸೆಗೆ ತಪ್ಪಿಸಿಕೊಂಡವರನ್ನು ಹಿಂಬಾಲಿಸಿ ಕ್ರಮಬದ್ಧ ಚಿಕಿತ್ಸೆ ತೆಗೆದುಕೊಳ್ಳುವಂತೆ ಮನವೊಲಿಸಿರುವುದರಿಂದ ರಾಜ್ಯದಲ್ಲಿ ಶೇಕಡಾ 50 ಹಳ್ಳಿಗಳಲ್ಲಿ ಕುಷ್ಠರೋಗವಿಲ್ಲ ಹಾಗೂ ಶೇಕಡಾ 35 ರೋಗಿಗಳು ತಾವಾಗಿಯೇ ಬಂದು ನೊಂದಾಯಿಸಿಕೊಂಡು ಚಿಕಿತ್ಸೆ ಪಡೆಯುತ್ತಿದ್ದಾರೆ.

ಬಹು ಔಷಧಿ ಚಿಕಿತ್ಸೆ ಕಾರ್ಯಕ್ರಮವಿಲ್ಲದ ಪ್ರದೇಶಗಳಲ್ಲಿ ಸಮೀಕ್ಷೆ, ಶಿಕ್ಷಣ ಹಾಗೂ ಚಿಕಿತ್ಸಾ ಕೇಂದ್ರಗಳು ಹಾಗೂ ವೈದ್ಯಾಧಿಕಾರಿಗಳ ಮೇಲ್ವಿಚಾರಣೆಯ ಮೇಲೆ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಹೊಸ ರೋಗಿಗಳನ್ನು ಪತ್ತೆ ಹಚ್ಚಿ ಚಿಕಿತ್ಸೆಗೆ ಒಳಪಡಿಸಲಾಗುತ್ತಿದೆ. ಈ ಜಿಲ್ಲೆಗಳಲ್ಲಿ ಬಹು ಔಷಧಿಗಳ ಚಿಕಿತ್ಸಾ ಕಾರ್ಯಕ್ರಮವನ್ನು 1994-95ರಲ್ಲಿ ಜಾರಿಗೊಳಿಸಲಾಗುವುದು.

ಈ ಮೇಲಿನ ಕ್ರಮದಿಂದ ಸಮಾಜದಲ್ಲಿ ರೋಗದ ಬಗ್ಗೆ ಜಾಗ್ರತೆಯು ಹೆಚ್ಚು ಹೆಚ್ಚಿರುವುದು ಕಂಡು ಬರುತ್ತದೆ.

4. **ಕುಷ್ಠರೋಗಿಗಳ ಸಮೀಕ್ಷೆ ಕಾರ್ಯ :**

ಸಕ್ರಿಯ ಜಾಗರೂಕತೆ ಹಾಗೂ ಸ್ವಯಂ ಪ್ರೇರಣೆಯಿಂದ ಬರುತ್ತಿರುವ ರೋಗಿಗಳಲ್ಲದೇ ಕುಷ್ಠರೋಗ ಮೌಲ್ಯ ಮಾಪನ ಸಮೀಕ್ಷಾತಂಡಗಳೂ ಸಹ 1993-94ರಲ್ಲಿ 4 ಜಿಲ್ಲೆಗಳಲ್ಲಿ, 239 ಹಳ್ಳಿಗಳಿಗೆ ಭೇಟಿ ನೀಡಿದೆ ಹಾಗೂ 69 ಶಾಲೆಗಳಿಗೆ ಭೇಟಿ ನೀಡಿ ಶಾಲಾ ಮಕ್ಕಳ ಸಮೀಕ್ಷೆ ನಡೆಸಿ 349 ಹೊಸ ರೋಗಿಗಳನ್ನು ಪತ್ತೆ ಹಚ್ಚಲಾಗಿದೆ.

5. **ಮೌಲ್ಯಮಾಪನ**

5.1 ಕಾರ್ಯಕ್ರಮವನ್ನು ಮೌಲ್ಯಮಾಪನ ಮಾಡಲು ಮಾಸಿಕ ಹಾಗೂ ತ್ರೈಮಾಸಿಕ ಪರಿಶೀಲನಾ ಸಭೆಗಳನ್ನು ನಡೆಸಿ ಈ ಕಾರ್ಯಕ್ರಮದ ಚಟುವಟಿಕೆಗಳ ಮೌಲ್ಯಮಾಪನವನ್ನು ನಡೆಸಲಾಗುತ್ತಿದೆ.

5.2 **ಮೇಲ್ವಿಚಾರಣೆ**

ರಾಜ್ಯ ಕುಷ್ಠರೋಗಾಧಿಕಾರಿಗಳು, ಜಿಲ್ಲಾ ಕುಷ್ಠರೋಗಾಧಿಕಾರಿಗಳು, ವೈದ್ಯಾಧಿಕಾರಿಗಳು ಹಾಗೂ ವೈದ್ಯೇತರ ಮೇಲ್ವಿಚಾರಕರು ಇವರುಗಳು ಪದೇ ಪದೇ ಕ್ಷೇತ್ರ ವೀಕ್ಷಣೆ ಮಾಡುತ್ತಿದ್ದಾರೆ.

5.3 **ಸಲಹೆಗಾರರು**

ಭಾರತ ಸರ್ಕಾರದಿಂದ ನೇಮಿಸಲ್ಪಟ್ಟ ಸಲಹೆಗಾರರು ಈ ಕಾರ್ಯಕ್ರಮದ ಮೌಲ್ಯಮಾಪನ ಮಾಡಿ ಸೂಕ್ತ ಸಲಹೆಗಳನ್ನು ನಿರ್ದೇಶಕರಿಗೂ ಹಾಗೂ ಜಿಲ್ಲಾ ಕುಷ್ಠ ರೋಗಾಧಿಕಾರಿಗಳಿಗೂ ನೀಡುತ್ತಿದ್ದಾರೆ.

6. **ತರಬೇತಿ**

ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮದಡಿಯಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮತ್ತು ಪ್ರಾಥಮಿಕ ಆರೋಗ್ಯ ಘಟಕಗಳ ವೈದ್ಯಾಧಿಕಾರಿಗಳು, ಹಿರಿಯ ಮತ್ತು ಕಿರಿಯ ವೈದ್ಯೇತರ ಮೇಲ್ವಿಚಾರಕರು, ಅರೆ ವೈದ್ಯಕೀಯ ಸಿಬ್ಬಂದಿಗಳು ಮತ್ತು ವಿವಿಧೋದ್ದೇಶ ಕಾರ್ಯಕರ್ತರುಗಳಿಗೆ ಮೂರು ದಿನಗಳ ಓರಿಯೆಂಟೇಷನ್ ತರಬೇತಿಯನ್ನು ನೀಡಲಾಗುತ್ತದೆ.

1993ರ ಸೆಪ್ಟೆಂಬರ್ ಅಂತ್ಯದವರೆಗೆ ವಿವಿಧ ವರ್ಗಗಳ ಹುದ್ದೆಗಳವರಿಗೆ ನೀಡಿದ ಓರಿಯೆಂಟೇಷನ್ ತರಬೇತಿಯ ವಿವರಗಳು ಕೆಳಕಂಡಂತಿವೆ.

| | | |
|---|---|---|
| 1. | ಪ್ರಾಥಮಿಕ ಆರೋಗ್ಯ ಕೇಂದ್ರ : ಪ್ರಾಥಮಿಕ ಆರೋಗ್ಯ ಘಟಕಗಳ ವೈದ್ಯಾಧಿಕಾರಿಗಳು | 997 |
| 2. | ಅರೆ ವೈದ್ಯಕೀಯ ಸಿಬ್ಬಂದಿ ಮತ್ತು ವೈದ್ಯೇತರ ಮೇಲ್ವಿಚಾರಕರು (ಹಿರಿಯ ಮತ್ತು ಕಿರಿಯ) | 1375 |
| 3. | ವಿವಿಧೋದ್ದೇಶ ಕಾರ್ಯಕರ್ತರುಗಳು | 3217 |

7. ಮಚ್ಚೆಗಳು

ಹೊಸದಾಗಿ ಪತ್ತೆ ಹಚ್ಚಿದ ರೋಗಿಗಳಲ್ಲಿ ಒಂದೇ ಒಂದು ಮಚ್ಚೆ ಇರುವ ರೋಗಿಗಳೇ ಹೆಚ್ಚಾಗಿ ಕಂಡುಬರುತ್ತಿದ್ದಾರೆ. ಇದರಿಂದ ಪ್ರಾರಂಭದಲ್ಲಿ ಗುರುತಿಸಿರುವ ರೋಗಿಗಳ ಸಂಖ್ಯೆ ಶೇಕಡಾ 50 ರಷ್ಟು ಕಂಡುಬಂದಿದೆ.

8.ಆಯವ್ಯಯ 93- 94

| | | ನಗದು ರೂಪ | ವಸ್ತು ರೂಪ | ವೆಚ್ಚ |
|---|---|---|---|---|
| 1. | ಕೇಂದ್ರ ಪುರಸ್ಕೃತ ಯೋಜನೆ | ರೂ.100ಲಕ್ಷ | ರೂ. 80ಲಕ್ಷ* | ರೂ. 32.75ಲಕ್ಷ |

*80 ಲಕ್ಷ ರೂ. ಬೆಲೆಯ ಔಷಧಿಗಳು,
ಸೂಕ್ಷ್ಮ ದರ್ಶಕ ಯಂತ್ರಗಳು ಮತ್ತು
ಆರೋಗ್ಯ ಶಿಕ್ಷಣ ಸಾಮಗ್ರಿಗಳನ್ನು
ಭಾರತ ಸರ್ಕಾರವು ಸರಬರಾಜು ಮಾಡಿದೆ.

| ತಾತ್ಕಾಲಿಕ ಅಯವ್ಯಯ | | ನಿಗದಿಪಡಿಸಿರುವುದು | ವೆಚ್ಚ |
|---|---|---|---|
| 2. | ರಾಜ್ಯ ಯೋಜನೆಯಡಿ | ರೂ. 30 ಲಕ್ಷ | ರೂ. 22.05 ಲಕ್ಷ |

| ಯೋಜನೇತರ | ನಿಗದಿಪಡಿಸಿರುವುದು | ವೆಚ್ಚ |
|---|---|---|
| ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ | ರೂ. 286.50ಲಕ್ಷ | ರೂ.186.15 ಲಕ್ಷ |

## ರಾಷ್ಟ್ರೀಯ ಕ್ಷಯರೋಗ ನಿಯಂತ್ರಣ ಕಾರ್ಯಕ್ರಮ

### ಕಾರ್ಯಕ್ರಮದ ಮುಖ್ಯ ಉದ್ದೇಶಗಳು.

ಕ್ಷಯ ರೋಗಿಗಳನ್ನು ಪತ್ತೆ ಹಚ್ಚಲು ಎಲ್ಲಾ ಆರೋಗ್ಯ ಸೇವಾಸಂಸ್ಥೆಗಳ ಮೂಲಕ ಅನುಕೂಲತೆಗಳನ್ನು ಪೂರೈಸುವುದು.

ಮನೆಯಲ್ಲೇ ಕ್ಷಯರೋಗಿಗೆ ಬೇಕಾಗಿರುವ ಔಷಧೋಪಚಾರಗಳನ್ನು ಉಚಿತವಾಗಿ ಒದಗಿಸುವುದು ಮತ್ತು

ರೋಗಿಗಳಿಗೆ ರೋಗ ಪತ್ತೆ ಹಚ್ಚುವ ಬಗ್ಗೆ ಮತ್ತು ಪೂರ್ವ ಚಿಕಿತ್ಸೆಯ ಬಗ್ಗೆ ಆರೋಗ್ಯ ಶಿಕ್ಷಣ ನೀಡುವುದು.

### ಹೆಚ್ಚಿನ ಸಂಖ್ಯೆಯಲ್ಲಿ ನಡೆಸಲು ಕ್ರಮ ಕೈಗೊಳ್ಳುವ ಬಗ್ಗೆ

ರಾಜ್ಯಾದ್ಯಂತ ಕ್ಷಯರೋಗ ಕಾರ್ಯಕ್ರಮದ ಮೇಲ್ವಿಚಾರಣೆ. ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರದ ಸರಬರಾಜಿನ ಬಗ್ಗೆ ಗಮನ ನೀಡುವುದು.

ಜಿಲ್ಲಾ ಕ್ಷಯರೋಗಾಧಿಕಾರಿಗಳು ನಡೆಸುವ ವಿಚಾರಗೋಷ್ಠಿ ಹಾಗೂ ಶಿಬಿರಗಳ ಮೇಲ್ವಿಚಾರಣೆ.

## ಕ್ಷಯರೋಗ ಕಾರ್ಯಕ್ರಮದ ಅನುಷ್ಠಾನ

ರಾಜ್ಯದ 20 ಜಿಲ್ಲೆಗಳಲ್ಲಿ ಎಲ್ಲಾ ಜಿಲ್ಲಾ ಕ್ಷಯರೋಗ ಕೇಂದ್ರಗಳಿಗೆ ರಾಷ್ಟ್ರೀಯ ಕ್ಷಯರೋಗ ಕಾರ್ಯಕ್ರಮ ಅನುಷ್ಠಾನಗೊಳಿಸಲು ಸಿಬ್ಬಂದಿಯನ್ನು ಒದಗಿಸಲಾಗಿದೆ. ರೋಗ ತಪಾಸಣೆ, ಔಷಧ ಉಪಚಾರ, ಕ್ಷಯರೋಗ ನಿರೋಧಕ ಔಷಧಗಳು, ರಾಸಾಯನಿಕ ವಸ್ತುಗಳು, ಕ್ಷ - ಕಿರಣ ಪಟಗಳು, ಗಾಜಿನ ಫಲಕ (ಸ್ಲೈಡ್ಸ್) ಉಗುಳುವ ಬಟ್ಟಲುಗಳು ಸೂಕ್ಷ್ಮದರ್ಶಕ ಯಂತ್ರಗಳು, ಕ್ಷ-ಕಿರಣ ಯಂತ್ರಗಳು, ವಾಹನಗಳು ಮತ್ತು ಲೇಖನ ಸಾಮಗ್ರಿಗಳ ಸರಬರಾಜು, ಆರೋಗ್ಯ ಶಿಕ್ಷಣ ಚಟುವಟಿಕೆಯ ಮೇಲ್ವಿಚಾರಣೆ, ವೈದ್ಯಕೀಯ ಮತ್ತು ಅರೆವೈದ್ಯಕೀಯ ಸಿಬ್ಬಂದಿ ವರ್ಗದವರಿಗೆ ತರಬೇತಿ ನೀಡುವಿಕೆ ಮುಂತಾದವುಗಳು ಈ ಕಾರ್ಯಕ್ರಮದಲ್ಲಿ ಒಳಗೊಂಡಿರುತ್ತವೆ.

## ಗುರಿಯನ್ನು ಸಾಧಿಸುವ ಬಗ್ಗೆ ಕೈಗೊಂಡಿರುವ ಕ್ರಮಗಳು

ಕ್ಷಯ ರೋಗಿಗಳನ್ನು ಪತ್ತೆ ಹಚ್ಚುವುದು.

ಎಲ್ಲಾ ಜಿಲ್ಲಾ ಕ್ಷಯರೋಗ ಕೇಂದ್ರಗಳಲ್ಲಿ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಕ್ಷಯರೋಗಿಗಳಲ್ಲಿ ಟಿ.ಟಿ.ಬ್ಯಾಸಿಲೈಗಳನ್ನು ಪತ್ತೆ ಹಚ್ಚುವುದು.

ಎಲ್ಲಾ ಜಿಲ್ಲಾ ಕ್ಷಯರೋಗ ಕೇಂದ್ರಗಳಲ್ಲಿ ಮತ್ತು ಸೂಕ್ಷ್ಮದರ್ಶಕ ಕೇಂದ್ರಗಳಲ್ಲಿ ರೋಗಿಗಳಲ್ಲಿ ಎಂ.ಆರ್. ಪರೀಕ್ಷೆ ಮೂಲಕ ಕ್ಷಯರೋಗವನ್ನು ಪತ್ತೆ ಹಚ್ಚುವುದು.

ಕ್ಷಯರೋಗಿಗಳಿಗೆ ಆದ್ಯತೆ ಮೇರೆಗೆ ಚಿಕಿತ್ಸೆಯನ್ನು ನೀಡಲಾಗುತ್ತದೆ.

ಕ್ಷಯರೋಗಿಗಳಿಗೆ ಚಿಕಿತ್ಸೆಯನ್ನು ನೀಡುವಾಗ ಮತ್ತು ರೋಗಗುಣವಾಗುವವರೆಗೆ ಚಿಕಿತ್ಸಾ ಕ್ರಮವನ್ನು ಅನುಸರಿಸುವಂತೆ ನೋಡಿಕೊಳ್ಳುವುದು.

## ತರಬೇತಿ

1993-94ನೇ ಸಾಲಿನಲ್ಲಿ ಇಲಾಖಾ ಸಿಬ್ಬಂದಿಯವರಿಗೆ ರಾಷ್ಟ್ರೀಯ ಕ್ಷಯರೋಗ ನಿಯಂತ್ರಣ ಕಾರ್ಯಕ್ರಮದಡಿಯಲ್ಲಿ ತರಬೇತಿ ನೀಡಲಾಯಿತು.

1993-94ನೇ ಸಾಲಿನಲ್ಲಿ ತರಬೇತಿ ಹೊಂದಿದ ಸಿಬ್ಬಂದಿ ವರ್ಗದ ವಿವರಗಳು ಈ ಕೆಳಕಂಡಂತಿದೆ.

| | | | |
|---|---|---|---|
| 1. | ಹೌಸ್ ಸರ್ಜನ್‌ಗಳು | : | 370 |
| 2. | ಹಿರಿಯ ಆರೋಗ್ಯ ಸಹಾಯಕರು | : | 75 |
| 3. | ಬ್ಲಾಕ್ ಹೆಲ್ತ್ ಎಜುಕೇಟರ್ಸ್ | : | 10 |
| 4. | ಸ್ನಾತಕೋತ್ತರ ವಿದ್ಯಾರ್ಥಿಗಳು | : | 30 |
| 5. | ವೈದ್ಯಕೀಯ ವಿದ್ಯಾರ್ಥಿಗಳು | : | 73 |
| 6. | ವೈದ್ಯಾಧಿಕಾರಿಗಳು | : | 12 |
| 7. | ನರ್ಸಿಂಗ್ ವಿದ್ಯಾರ್ಥಿಗಳು | : | 73 |
| 8. | ನೈರ್ಮಲ್ಯ ನಿರೀಕ್ಷಕರು | : | 34 |

## ಆರ್ಥಿಕ ಸಾಧನೆ

### 1993-94ನೇ ಸಾಲಿನ ಅನುದಾನ ಮತ್ತು ವೆಚ್ಚ :

| ಕೇಂದ್ರ ಸರ್ಕಾರ | | ರಾಜ್ಯ ಸರ್ಕಾರ | | | |
|---|---|---|---|---|---|
| ಯೋಜನೆ | | ಯೋಜನೆ | | ಯೋಜನೇತರ (ಲೇಡಿ ವಿಲ್ಲಿಂಗಡನ್ ರಾಜ್ಯ ಕ್ಷಯ ರೋಗ ಕೇಂದ್ರದ್ದು ಮಾತ್ರ) | |
| ಅನುದಾನ ನಿಗಧಿಯಾಗಿರುವ ಬಗ್ಗೆ | ಖರ್ಚು ವೆಚ್ಚ | ಅನುದಾನ ನಿಗಧಿಯಾಗಿರುವ ಬಗ್ಗೆ | ಖರ್ಚು ವೆಚ್ಚ | ಅನುದಾನ ನಿಗಧಿಯಾಗಿರುವ ಬಗ್ಗೆ | ಖರ್ಚು ವೆಚ್ಚ |
| 117-00 ಲಕ್ಷ | 102-31 ಲಕ್ಷ | 107.00 ಲಕ್ಷ | 12,71,887-00 | 65,72,000-00 | 50,01,447-00 |

## ಭೌತಿಕ ಸಾಧನೆ

### 1993-94ನೇ ಸಾಲಿನ ಗುರಿ ಮತ್ತು ಸಾಧನೆ :

| | ಹೊಸ ಕ್ಷಯ ರೋಗಿಗಳನ್ನು ಪತ್ತೆ ಹಚ್ಚುವುದು | | | ಕಫ ಪರೀಕ್ಷೆ ನಡೆಸಿರುವುದು | | |
|---|---|---|---|---|---|---|
| | ಗುರಿ | ಸಾಧನೆ | ಶೇಕಡ | ಗುರಿ | ಸಾಧನೆ | ಶೇಕಡ |
| 1993-94 | 88,080 | 67,790 | 77.0 | 1,85,200 | 2,11,710 | 114.3 |

# ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮ

ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮವು 1976ರಲ್ಲಿ ಕೇಂದ್ರ ಸರ್ಕಾರದ ನೆರವಿನಿಂದ ಪ್ರಾರಂಭವಾಯಿತು.

## ಉದ್ದೇಶ

ಹಾಲಿ ಇರುವ ಕುರುಡುತನವನ್ನು ಶೇಕಡಾ 1.4ನಿಂದ 2,000ನೇ ಇಸವಿಗೆ ಶೇಕಡಾ 0.3ಕ್ಕೆ ಇಳಿಸುವ ಗುರಿ ಹೊಂದಿದೆ. ಕಣ್ಣಿನ ಪೊರೆಯಿಂದ ಇಸವಿಗೆ ಶೇಕಡಾ 0.3ಕ್ಕೆ ಇಳಿಸುವ ಗುರಿ ಹೊಂದಿದೆ. ಕಣ್ಣಿನ ಪೊರೆಯಿಂದ ಉಂಟಾಗುವ ಕುರುಡುತನವು ಶೇಕಡಾ 82ರಷ್ಟು ಇದೆ. ಕರ್ನಾಟಕ ಜನಸಂಖ್ಯೆಯು ಸುಮಾರು 4.5 ಕೋಟಿಯಷ್ಟಿದ್ದು, ಅಂಧರ ಸಂಖ್ಯೆಯನ್ನು 4.5 ಲಕ್ಷವೆಂದು ಅಂದಾಜು ಮಾಡಲಾಗಿದೆ. ಕರ್ನಾಟಕದಲ್ಲಿ ಅಂಧತ್ವದ ಪ್ರಮಾಣವು ಶೇಕಡಾ 1.29ರಷ್ಟಿದೆ. ಅಂಧತ್ವ ತಡೆಯುವಲ್ಲಿ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

1. ಕಾರ್ಯಕ್ರಮದ ಅನುಷ್ಠಾನದ ಬಗ್ಗೆ ಯೋಜನೆ, ಮೇಲ್ವಿಚಾರಣೆ ಹಾಗೂ ಮೌಲ್ಯಮಾಪನ ಮಾಡಲು ರಾಜ್ಯ ಮಟ್ಟದಲ್ಲಿ ಒಂದು ನೇತ್ರ ವಿಭಾಗವನ್ನು ತೆರೆಯಲಾಗಿದೆ.
2. ನೇತ್ರಚಿಕಿತ್ಸೆಯಲ್ಲಿ ಮುಂದುವರಿದ ತಂತ್ರಜ್ಞಾನ ನೀಡಲು ಬೆಂಗಳೂರಿನ ಮಿಂಟೋ ಆಸ್ಪತ್ರೆಯನ್ನು ಪ್ರಾದೇಶಿಕ ನೇತ್ರ ಚಿಕಿತ್ಸಾ ಸಂಸ್ಥೆಯಾಗಿ ಮೇಲ್ದರ್ಜೆಗೇರಿಸಲಾಗಿದೆ.
3. ಕೆಳಕಂಡ ವೈದ್ಯಕೀಯ ಕಾಲೇಜುಗಳನ್ನು ತಜ್ಞನೇತ್ರ ಚಿಕಿತ್ಸೆ ದೊರೆಯುವಂತೆ ಮೇಲ್ದರ್ಜೆಗೇರಿಸಲಾಗಿದೆ.
   1. ಜೆ.ಜೆ.ಎಂ. ವೈದ್ಯಕೀಯ ಕಾಲೇಜು, ದಾವಣಗೆರೆ
   2. ಜೆ.ಎನ್. ವೈದ್ಯಕೀಯ ಕಾಲೇಜು, ಬೆಳಗಾಂ
   3. ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ, ಹುಬ್ಬಳ್ಳಿ
   4. ಮೈಸೂರು ವೈದ್ಯಕೀಯ ಮಹಾವಿದ್ಯಾಲಯ, ಮೈಸೂರು
4. ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ನೇತ್ರಚಿಕಿತ್ಸೆಯ ಸೌಲಭ್ಯ ಕಲ್ಪಿಸುವ ವ್ಯವಸ್ಥೆ ಮಾಡಲಾಗಿದೆ.
5. ನಾಲ್ಕು ಕಂದಾಯ ವಿಭಾಗದಲ್ಲಿ ನಾಲ್ಕು ಸಂಚಾರಿ ವಿಭಾಗೀಯ ನೇತ್ರ ಘಟಕಗಳು ಕಾರ್ಯ ನಿರ್ವಹಿಸುತ್ತಿರುತ್ತವೆ.
6. ದಾವಣಗೆರೆ, ಚಿಕ್ಕಮಗಳೂರು, ವಿಜಾಪುರ, ರಾಯಚೂರು, ಕಾರವಾರ, ಹಾಸನ ತುಮಕೂರು ಶಿವಮೊಗ್ಗ, ಧಾರವಾಡ, ಮಂಗಳೂರು, ಮಂಡ್ಯ, ಬೀದರ್, ಕೋಲಾರ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ 14 ಜಿಲ್ಲಾ ಸಂಚಾರಿ ನೇತ್ರ ಘಟಕಗಳನ್ನು ಸ್ಥಾಪಿಸಲಾಗಿದೆ.



5981-3

7. 336 ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಒಂದು ನೇತ್ರ ಸಹಾಯಕರ ಹುದ್ದೆಯಂತೆ ಹುದ್ದೆಗಳನ್ನು ಸೃಷ್ಟಿಸಿ ಅಭಿವೃದ್ಧಿ ಪಡಿಸಲಾಗಿದೆ.

8. ಮಿಂಟೋ ಕಣ್ಣಾಸ್ಪತ್ರೆ, ಬೆಂಗಳೂರು, ಕೃಷ್ಣರಾಜೇಂದ್ರ ಆಸ್ಪತ್ರೆ, ಮೈಸೂರು ಮತ್ತು ಜಿಲ್ಲಾ ಆಸ್ಪತ್ರೆ, ಬೆಳಗಾವಿಯಲ್ಲಿ ಕಣ್ಣಿನ ಕಸಿ ಶಸ್ತ್ರಚಿಕಿತ್ಸೆಯನ್ನು ನೀಡಲು ನೇತ್ರ ಬ್ಯಾಂಕ್ ಗಳನ್ನು ಸ್ಥಾಪಿಸಲಾಗಿದೆ.

9. ಡ್ಯಾನಿಡಾ ಇಂಟರ್ ನ್ಯಾಷನಲ್ ಅಭಿವೃದ್ಧಿ ತುಮಕೂರು ಜಿಲ್ಲೆಯನ್ನು ಪ್ರಾಯೋಗಿಕ ಯೋಜನೆಗಾಗಿ ಅಳವಡಿಸಿಕೊಂಡಿದ್ದು, ಈ ಯೋಜನೆಯಿಂದ ಉತ್ತಮ ಪ್ರಗತಿ ಸಾಧಿಸಲಾಗಿದೆ. ಈ ಯೋಜನೆಯಡಿಯಲ್ಲಿ ಉಪಕರಣಗಳು, ಔಷಧಿಗಳು ಮತ್ತು ವಾಹನಗಳನ್ನು ಸರಬರಾಜು ಮಾಡಲಾಗಿದೆ.

ಡ್ಯಾನಿಡಾ ಸಂಸ್ಥೆಯವರು ಈ ಪ್ರಾಯೋಗಿಕ ಯೋಜನೆಯನ್ನು ರಾಜ್ಯಾದ್ಯಂತ ವಿಸ್ತರಿಸಲು ಮುಂದೆ ಬಂದಿರುವರು. ಈ ಡ್ಯಾನಿಡ ಸಂಸ್ಥೆಯವರು ಅಂಧತ್ವ ನಿವಾರಣೆ ಕಾರ್ಯಕ್ರಮಕ್ಕೆ ಬೆಂಬಲ ನೀಡುವ ಸಲುವಾಗಿ ಕೆಳಕಂಡ ಸೌಲಭ್ಯಗಳನ್ನು ಒದಗಿಸುತ್ತಿದ್ದಾರೆ.

ಅ) ಸಂಚಾರಿ ನೇತ್ರ ಘಟಕಗಳಿಗೆ ಉಪಕರಣ ಮತ್ತು ವಾಹನಗಳ ಸರಬರಾಜು
ಆ) ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಉಪಕರಣಗಳ ಪೂರೈಕೆ
ಇ) ಪ್ರಾಥಮಿಕ ಆರೋಗ್ಯ ಕೇಂದ್ರಗಳ ವೈದ್ಯಾಧಿಕಾರಿಗಳು ಮತ್ತು ನೇತ್ರ ಸಹಾಯಕರಿಗೆ ನಿರಂತರ ಶಿಕ್ಷಣ ತರಬೇತಿ ನೀಡುವುದು.
ಈ) ರಾಜ್ಯ ನೇತ್ರ ಘಟಕದ ಪುನರಾವರ್ತಿತ ಖರ್ಚನ್ನು ತುಂಬಿಕೊಡುವುದು.
ಉ) ಪ್ರಾಯೋಗಿಕ ಜಿಲ್ಲೆ, ತುಮಕೂರಿಗೆ ಧನ ಸಹಾಯ
ಊ) ಜಿಲ್ಲಾ ಅಂಧತ್ವ ನಿಯಂತ್ರಣಾ ಸೊಸೈಟಿಗಳ ಮೇಲ್ವಿಚಾರಣೆ ಹಾಗೂ ಅವುಗಳಿಗೆ ಹಣ ಒದಗಿಸುವಿಕೆ.

10. ಡ್ಯಾನಿಡಾ ಯೋಜನೆ ಅಡಿಯಲ್ಲಿ ಎಲ್ಲಾ ಜಿಲ್ಲೆಗಳಲ್ಲಿ ಅಂಧತ್ವ ನಿಯಂತ್ರಣಾ ಸೊಸೈಟಿಗಳನ್ನು ಸ್ಥಾಪಿಸಲಾಗಿದೆ. ಜಿಲ್ಲಾಧಿಕಾರಿಯವರು ಈ ಸೊಸೈಟಿಯ ಅಧ್ಯಕ್ಷರಾಗಿರುತ್ತಾರೆ. ಜಿಲ್ಲಾ ಅಂಧತ್ವ ನಿಯಂತ್ರಣಾ ಕಾರ್ಯಕ್ರಮದ ಅಧಿಕಾರಿಯನ್ನು "ಡ್ಯಾನಿಡಾ"ದವರು ನೇಮಕ ಮಾಡುತ್ತಾರೆ. ಇವರು ಈ ಸೊಸೈಟಿಯ ಸದಸ್ಯಕಾರ್ಯದರ್ಶಿಯಾಗಿ ಕಾರ್ಯಕ್ರಮ ನಿರ್ವಹಿಸುವರು. ಈ ಸೊಸೈಟಿಗಳ ಮುಖ್ಯ ಕಾರ್ಯ ಚಟುವಟಿಕೆಗಳು ಕೆಳಕಂಡಂತಿರುತ್ತವೆ.

1. ಕಾಲಕಾಲಕ್ಕೆ ಜಿಲ್ಲೆಯಲ್ಲಿನ ಅಂಧತ್ವದ ಪರಿಮಾಣವನ್ನು ನಿಷ್ಕರ್ಷಿಸಿ ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ನಿರ್ಧಾರವನ್ನು ತೆಗೆದುಕೊಳ್ಳುವುದು ಮತ್ತು ವರದಿ ಮಾಡುವುದು.

2. ಸ್ವಯಂ ಸೇವಾ ಸಂಸ್ಥೆಗಳನ್ನು ಈ ಕಾರ್ಯಕ್ರಮದಲ್ಲಿ ಭಾಗವಹಿಸುವಂತೆ ಪ್ರಚೋದಿಸಿ ಅವರು ಉಚಿತ ನೇತ್ರ ಚಿಕಿತ್ಸಾ ಶಿಬಿರವನ್ನು ಏರ್ಪಡಿಸುವಂತೆ ಮನ ಒಲಿಸುವುದು.

3. ನೇತ್ರಚಿಕಿತ್ಸೆಗೆ ಒಳಗಾದ ಬಡ ರೋಗಿಗಳಿಗೆ ಉಚಿತ ಕನ್ನಡಕಗಳ ವಿಲೇವಾರಿ.

ಈ ಸೊಸೈಟಿಗಳಿಗೆ ಬೇಕಾದ ಹಣದ ಸವಲತ್ತನ್ನು ನೇರವಾಗಿ "ಡ್ಯಾನಿಡಾ"ದವರು ಕೇಂದ್ರ ಸರ್ಕಾರದ ಮೂಲಕ ಬಿಡುಗಡೆ ಮಾಡುವರು.

**ಈ ಕಾರ್ಯಕ್ರಮದ ಭೌತಿಕ ಗುರಿ ಮತ್ತು ಸಾಧನೆ.**

ಈ ಕೆಳಕಂಡ ಪಟ್ಟಿಯು ಪೂರೆ ಶಸ್ತ್ರಚಿಕಿತ್ಸೆಯ ಗುರಿ, ಸಾಧನೆ ಹಾಗೂ ಶೇಕಡಾವಾರು ಪ್ರಮಾಣವನ್ನು ತೋರಿಸುತ್ತದೆ.

| ಕ್ರ.ಸಂ. | ವರ್ಷ | ಗುರಿ | ಸಾಧನೆ | ಶೇಕಡಾವಾರು |
|---|---|---|---|---|
| 1 | 1993-94 | 1,40,000 | 93,359 | 66.7 |

## ಆರ್ಥಿಕ ಗುರಿ ಮತ್ತು ಸಾಧನೆ

1. ರಾಜ್ಯ ಯೋಜನೇತರ (ಆರೋಗ್ಯ) 2. ರಾಜ್ಯ ಯೋಜನೆ (ಆರೋಗ್ಯ)

*(ಲಕ್ಷ ರೂ.ಗಳಲ್ಲಿ)*

| ಖರ್ಚು | ಅನುದಾನ | ಖರ್ಚು | ಖರ್ಚು | ಅನುದಾನ | ಖರ್ಚು |
|---|---|---|---|---|---|
| 1993-94 | 65.16 | 58.44 | 1993-94 | 30.00 | 12.35 |

3. ವೈದ್ಯಕೀಯ ಶಿಕ್ಷಣಾ ರಾಜ್ಯ ಯೋಜನೆ 4. ಕೇಂದ್ರ ಸರ್ಕಾರದ ಅನುದಾನ ಕೇಂದ್ರ ಯೋಜನೆ (ಆರೋಗ್ಯ ಮತ್ತು ವೈದ್ಯಕೀಯ ಶಿಕ್ಷಣಾ) ಶೇ.100.

| ವರ್ಷ | ಅನುದಾನ | ಖರ್ಚು | ವರ್ಷ | ರಾಜ್ಯ ಸರ್ಕಾರದ ಅನುದಾನ | ಭಾರತ ಸರ್ಕಾರದ ಅನುದಾನ | ಖರ್ಚು |
|---|---|---|---|---|---|---|
| 1993-94 | 50-00 | 11.05 | 1993-94 | 50.00 | 70.44 | 27.61 |

**ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ**

ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮದ ಮುಖ್ಯ ಉದ್ದೇಶವೇನೆಂದರೆ ಮಲೇರಿಯಾ ರೋಗದಿಂದ ಉಂಟಾಗುವ ಸಾವು ನೋವುಗಳನ್ನು ತಡೆಗಟ್ಟುವುದು ಹಾಗೂ ಮಲೇರಿಯಾ ಪ್ರಕರಣಗಳನ್ನು ಸಾರ್ವಜನಿಕ ಆರೋಗ್ಯಕ್ಕೆ ಧಕ್ಕೆಯಾಗದಷ್ಟು ಪ್ರಮಾಣಕ್ಕೆ ಇಳಿಸುವುದು.

ಈ ಕಾರ್ಯಕ್ರಮದಲ್ಲಿನ ಮುಖ್ಯ ಅಂಶಗಳು ಈ ಕೆಳಕಂಡಂತಿವೆ.

**ಪ್ರಾಥಮಿಕ ನಿಯಂತ್ರಣ ಹಂತ**

1. ಸಕ್ರಿಯ ಹಾಗೂ ಸ್ಥಿತ ರಕ್ತ ಲೇಪನ ಸಮೀಕ್ಷೆ
2. ರೋಗ ಪತ್ತೆ ಕಾರ್ಯ
3. ತೀವ್ರ ಚಿಕಿತ್ಸೆ

**ದ್ವಿತೀಯ ನಿಯಂತ್ರಣ ಹಂತ**

1. ಕೀಟನಾಶಕ ಸಿಂಪಡಣೆ,
2. ಜೈವಿಕ ಪರಿಸರ ನಿಯಂತ್ರಣ

ಕರ್ನಾಟಕ ರಾಜ್ಯದ ಸಾರ್ವಜನಿಕ ಆರೋಗ್ಯ ಅಧಿನಿಯಮದಂತೆ 'ಮಲೇರಿಯಾ' ರೋಗವನ್ನು 'ಪ್ರಕಟಿತ ರೋಗ' ವೆಂದು ಪರಿಗಣಿಸಲಾಗಿದೆ.

**ಆಡಳಿತ ವ್ಯವಸ್ಥೆ**

ಈ ಕಾರ್ಯಕ್ರಮವು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಸಮನ್ವಯದಿಂದ ಶೇಕಡ 50:50 ರಂತೆ ಖರ್ಚನ್ನು ಭರಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು ಈ ಕಾರ್ಯಕ್ರಮದ ಮುಖ್ಯಸ್ಥರಾಗಿರುತ್ತಾರೆ. ಜಂಟಿ ನಿರ್ದೇಶಕರು (ಮಲೇರಿಯಾ ಮತ್ತು ಫೈಲೇರಿಯಾ) ಇವರು ಕಾರ್ಯಕ್ರಮದ ಮುಖ್ಯಾಧಿಕಾರಿಯಾಗಿದ್ದು, ರಾಜ್ಯದಲ್ಲಿ ಇದರ ಅನುಷ್ಠಾನಕ್ಕೆ ಎಲ್ಲಾ ರೀತಿಯಲ್ಲೂ ಜವಾಬ್ದಾರಿ ಹೊಂದಿರುತ್ತಾರೆ. ಇವರಿಗೆ ತಾಂತ್ರಿಕ ಸಹಾಯಕರಾಗಿ ಕೇಂದ್ರಸ್ಥಾನದಲ್ಲಿ ಉಪ ನಿರ್ದೇಶಕರು (ಮಲೇರಿಯಾ ಮತ್ತು ಫೈಲೇರಿಯಾ), ಹಿರಿಯ ಕೀಟಶಾಸ್ತ್ರಜ್ಞರು ಮತ್ತು ವೈಜ್ಞಾನಿಕ ಅಧಿಕಾರಿಗಳು ಹಾಗೂ ಕೇಂದ್ರ ಮಲೇರಿಯಾ ಪ್ರಯೋಗ ಶಾಲೆಯಲ್ಲಿನ 21 ನುರಿತ ತಂತ್ರಜ್ಞರು, ಆರೋಗ್ಯ ನಿರೀಕ್ಷಕರು ಮತ್ತು ಇತರ ಕಛೇರಿ ಸಿಬ್ಬಂದಿ ವರ್ಗದವರು ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಸಹಾಯ ಮಾಡುತ್ತಾರೆ.

ನಾಲ್ಕು ವಿಭಾಗೀಯ ಮಟ್ಟದಲ್ಲಿ ಪ್ರತಿಯೊಂದು ವಿಭಾಗಕ್ಕೆ ಒಬ್ಬ ಉಪನಿರ್ದೇಶಕರನ್ನು ಹಾಗೂ ಕೀಟ ಶಾಸ್ತ್ರಜ್ಞರು ಮತ್ತು ಹಿರಿಯ ತಂತ್ರಜ್ಞರುಗಳನ್ನು ಮೇಲ್ವಿಚಾರಕರಾಗಿ ನೇಮಿಸಿಲಾಗಿದೆ. ರಾಜ್ಯದ 19 ಜಿಲ್ಲೆಗಳಲ್ಲಿ (ಕೊಡಗು ಜಿಲ್ಲೆಯ ವಿನಃ) ಪ್ರತಿ ಜಿಲ್ಲೆಗೆ ಒಬ್ಬ ಜಿಲ್ಲಾ ಮಲೇರಿಯಾಧಿಕಾರಿ ಹಾಗೂ ಸಹಾಯಕ ತಾಂತ್ರಿಕ ಸಿಬ್ಬಂದಿಗಳಾದ ಆರೋಗ್ಯ ಮೇಲ್ವಿಚಾರಕರು, ಹಿರಿಯ ಮತ್ತು ಕಿರಿಯ ಆರೋಗ್ಯ ಸಹಾಯಕರು, ಹಿರಿಯ ಪ್ರಯೋಗಶಾಲಾ ತಂತ್ರಜ್ಞರು ಹಾಗೂ ವಾಹನ ಸೌಕರ್ಯದೊಡನೆ ವಾಹನ ಚಾಲಕರು ಮಲೇರಿಯಾ ರೋಗ ನಿಯಂತ್ರಣದಲ್ಲಿ ನಿರತರಾಗಿರುತ್ತಾರೆ. ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳು ಮತ್ತು ಹಿರಿಯ ಹಾಗೂ ಕಿರಿಯ ಆರೋಗ್ಯ ಸಹಾಯಕರು ಈ ಕಾರ್ಯಕ್ರಮದ ಅತಿ ಮುಖ್ಯ ಅಂಗವಾಗಿ ಹಾಗೂ ಜನಸಂಪರ್ಕದ ಸಾಧನೆಯಾಗಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಿರುತ್ತಾರೆ. ಇವರು ನಿಗದಿತ ಕಾರ್ಯಕ್ರಮದಂತೆ ತಪ್ಪದೆ ಮನೆ ಮನೆಗೆ ಭೇಟಿ ನೀಡಿ ಜ್ವರ ಪೀಡಿತರಿಂದ ರಕ್ತ ಲೇಪನ

ಸಂಗ್ರಹಣೆ, ಮಲೇರಿಯಾ ರೋಗ ಪೀಡಿತರಿಗೆ ತೀವ್ರ ಚಿಕಿತ್ರೆ ಹಾಗೂ ಕೀಟನಾಶಕ ಸಿಂಪಡಣಾ ಕಾರ್ಯದಲ್ಲಿ ಸಂಪೂರ್ಣವಾಗಿ ನೆರವಾಗುತ್ತಾರೆ.

**ಸಾಧನೆಗಳು.**

1993-94ನೇ ಸಾಲಿನಲ್ಲಿ ರಾಜ್ಯದಲ್ಲಿ ಒಟ್ಟು 70,98,519 ರಕ್ತ ಲೇಪನಗಳನ್ನು ಜ್ವರಪೀಡಿತರಿಂದ ಸಂಗ್ರಹಿಸಿ, ಪರೀಕ್ಷಿಸಿ ಅವುಗಳಲ್ಲಿ 1,96,466 ಮಲೇರಿಯಾ ರೋಗ ಪ್ರಕರಣಗಳನ್ನು ಪತ್ತೆ ಹಚ್ಚಲಾಯಿತು. ಈ ಮಲೇರಿಯಾ ಪ್ರಕರಣಗಳಲ್ಲಿ 49,246 ಪ್ರಕರಣಗಳು ಮಾರಕವಾದ ಪಿ.ಎಫ್. ಮಲೇರಿಯಾ ಪ್ರಕರಣಗಳಾಗಿರುತ್ತವೆ. ಮುಖ್ಯವಾಗಿ ಚಿಕ್ಕಮಗಳೂರು, ತುಮಕೂರು, ಹಾಸನ, ಚಿತ್ರದುರ್ಗ, ಕೋಲಾರ ಹಾಗೂ ಮೈಸೂರು ಜಿಲ್ಲೆಗಳಲ್ಲಿ ಮಲೇರಿಯಾ ರೋಗವು ಉಲ್ಬಣಗೊಂಡಿರುತ್ತದೆ.

ಕಳೆದ 92-93ನೇ ಸಾಲಿನಲ್ಲಿನ ಪ್ರಕರಣಗಳಿಗೆ ಹೋಲಿಸಿದಾಗ 93-94ನೇ ವರ್ಷದಲ್ಲಿ ಸುಮಾರು ಶೇಕಡ 142ರಷ್ಟು ಹೆಚ್ಚಾಗಿದೆ.

**ಇದಕ್ಕೆ ಮುಖ್ಯ ಕಾರಣಗಳು ಈ ಕೆಳಕಂಡಂತಿವೆ.**

1. ರೈಲ್ವೆ ಇಲಾಖೆಯು ಮಾನೋಗೇಜ್ ಪರಿವರ್ತನಾ ಯೋಜನೆಯನ್ನು ತೀವ್ರವಾಗಿ ಕಾರ್ಯಗತಗೊಳಿಸುತ್ತಿರುವುದರಿಂದ ಏಪ್ರಿಲ್ : ಮೇ 93ರಿಂದ ಮಲೇರಿಯಾ ಪ್ರದೇಶಗಳಾದ ತಮಿಳುನಾಡು, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರಗಳಿಂದ ಕೂಲಿಕಾರರು ವಲಸೆ ಬಂದು, ರೋಗ ವಾಹಕ ಪ್ರದೇಶಗಳಾದ ತುಮಕೂರು, ಚಿಕ್ಕಮಗಳೂರು, ಹಾಸನ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ನೆಲೆಯೂರಿರುವುದು.
2. ಕೇಂದ್ರ ಸರ್ಕಾರವು ಸಕಾಲದಲ್ಲಿ ಕೀಟನಾಶಕಗಳನ್ನು ಸರಬರಾಜು ಮಾಡದಿರುವುದು ಹಾಗೂ ಇದರಿಂದ ಸಿಂಪಡಣಾ ಕಾರ್ಯವು 1993ನೇ ಸಾಲಿನಲ್ಲಿ ಸ್ಥಗಿತಗೊಂಡಿರುವುದು.
3. 1130 ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳಲ್ಲಿ ಸುಮಾರು 747ಹುದ್ದೆಗಳು ಖಾಲಿ ಇದ್ದು, ಇದರಿಂದ ಸಂಗ್ರಹಣೆಯಾದ ರಕ್ತಲೇಪನ ಪರೀಕ್ಷೆಯಲ್ಲಿ ವಿಳಂಬವಾದುದು.
4. ಮಲೇರಿಯಾ ನಿರೋಧಕ ಗುಳಿಗೆಗಳಾದ ಪ್ರೈಮಾಕ್ವಿನ್ ಮಾತ್ರೆಗಳ ಸರಬರಾಜಿನಲ್ಲಿ ಕೇಂದ್ರ ಸರ್ಕಾರ ವಿಳಂಬ ಮಾಡಿ, ರಾಜ್ಯದಲ್ಲಿದ್ದ ದಾಸ್ತಾನು ಹೆಚ್ಚಿನ ಪ್ರಕರಣಗಳಿಗೆ ಸಾಲದೆ ಬಂದಿದ್ದು, ತೀವ್ರ ಚಿಕಿತ್ಸೆಗಳಲ್ಲಿ ವಿಳಂಬವಾದದ್ದು.

**ಭೌತಿಕ ಪ್ರಗತಿ**

| ವರ್ಷ | ಜನಸಂಖ್ಯೆ | ರಕ್ತಲೇಪನ ಪರೀಕ್ಷೆ | ಮಲೇರಿಯಾ ಪ್ರಕರಣ | ಪಿಎಫ್ ಪ್ರಕರಣ |
|---|---|---|---|---|
| 1 | 2 | 3 | 4 | 5 |
| 1992-93 | 3,89,35,985 | 69,18,592 | 81,057 | 16,826 |
| 1993-94 | 4,17,07,834 | 70.98,519 | 1,96,466 | 49,246 |

| ವಾರ್ಷಿಕ ರಕ್ತ ಲೇಪನಾ ಪರೀಕ್ಷಾ ಪ್ರಮಾಣ | ವಾರ್ಷಿಕ ಪರಾವಲಂಬಿ ಸೂಚ್ಯಂಕ | ರಕ್ತಲೇಪನ ಪರಾವಲಂಬಿ ಪ್ರಮಾಣ | ರಕ್ತಲೇಪನದ ಫ್ಯಾಲ್ಸಿಫಾರಂ ಪ್ರಮಾಣ | ಶೇ. ತೀವ್ರ ಚಿಕಿತ್ಸೆ |
|---|---|---|---|---|
| (6) | (7) | (8) | (9) | (10) |
| 17.7 | 2.0 | 1.1 | 0.2 | 96.9 |
| 17.8 | 4.9 | 2.7 | 0.6 | 97.0 |

## ಆರ್ಥಿಕ ಪ್ರಗತಿ

| ವರ್ಷ | ಯೋಜನೆ | | | ಯೋಜನೇತರ | | |
|---|---|---|---|---|---|---|
| | ಒದಗಿಸಿರುವ ಆಯವ್ಯಯ | | ಖರ್ಚು | ಒದಗಿಸಿರುವ ಆಯವ್ಯಯ | | ಖರ್ಚು ನಂತರದ |
| | ರಾಜ್ಯ | ಕೇಂದ್ರ | ರಾಜ್ಯ | ಕೇಂದ್ರ | ರಾಜ್ಯ | ಕೇಂದ್ರ |
| 1993-94 | 453.39 ಲಕ್ಷ ರೂ. | 346.31 ಲಕ್ಷ ರೂ | 573.08 ಲಕ್ಷ ರೂ | 220.00 ಲಕ್ಷ ರೂ. (ಸರಬ ರಾಜುವೆಚ್ಚ) | 590.00 ಲಕ್ಷ ರೂ. | 441.64 ಲಕ್ಷ ರೂ. |

## ನಗರ ಮಲೇರಿಯಾ ಯೋಜನೆ

ಬೆಂಗಳೂರು, ಬಳ್ಳಾರಿ, ಬೆಳಗಾಂ, ಹೊಸಪೇಟೆ, ರಾಯಚೂರು, ಹಾಸನ, ತುಮಕೂರು ಮತ್ತು ಚಿಕ್ಕಮಗಳೂರು ನಗರಗಳಲ್ಲಿ ಈ ಯೋಜನೆಯು ಜಾರಿಯಲ್ಲಿದೆ. ಇದರ ಅನ್ವಯ ನಗರ ಪ್ರದೇಶಗಳಲ್ಲಿನ ಸೊಳ್ಳೆ ಉತ್ಪತ್ತಿ ಸ್ಥಾನಗಳಲ್ಲಿ ವಾರಕ್ಕೊಮ್ಮೆ ಕ್ರಿಮಿನಾಶಕ ಸಿಂಪಡಣೆಯನ್ನು ಮಾಡಿ, ರೋಗವಾಹಕ ಸೊಳ್ಳೆಗಳ ಉತ್ಪತ್ತಿಯನ್ನು ನಿಯಂತ್ರಿಸಲಾಗುತ್ತಿದೆ. ಇದಲ್ಲದೆ, ಜೈವಿಕ ನಿಯಂತ್ರಣ ವಿಧಾನಗಳಾದ ಸಣ್ಣ ಕಾಮಗಾರಿ ಹಾಗೂ ಸೊಳ್ಳೆಮರಿಗಳನ್ನು ತಿಂದು ಜೀವಿಸುವ ಗ್ಯಾಂಬೋಸಿಯಾ : ಗಪ್ಪಿ ಮೀನುಗಳನ್ನು ನಿಂತ ನೀರಿನಲ್ಲಿ ಬೆಳೆಸುವುದು, ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

# ರಾಷ್ಟ್ರೀಯ ಆನೆಕಾಲು ರೋಗ ನಿಯಂತ್ರಣ ಕಾರ್ಯಕ್ರಮ

ಆನೆಕಾಲು ರೋಗ ನಿಯಂತ್ರಣ ಕಾರ್ಯಕ್ರಮವನ್ನು ರಾಜ್ಯದ ಗುಲ್ಬರ್ಗಾ, ಬೀದರ್, ಬಿಜಾಪುರ, ರಾಯಚೂರು, ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಹಮ್ಮಿಕೊಳ್ಳಲಾಗಿದೆ.

ಈ ಕಾರ್ಯಕ್ರಮದಡಿಯಲ್ಲಿ ಒಟ್ಟು 7 ಆನೆಕಾಲು ರೋಗ ನಿಯಂತ್ರಣ ಘಟಕಗಳು ಹಾಗೂ 24 ಆನೆ ಕಾಲುರೋಗದ ಚಿಕಿತ್ಸಾಲಯಗಳು ಕಾರ್ಯ ನಿರ್ವಹಿಸುತ್ತಿವೆ. ಇದಲ್ಲದೆ

ಒಂದು ಆನೆಕಾಲು ರೋಗ ಸಮೀಕ್ಷಾ ಘಟಕವನ್ನು ಈ ರೋಗದ ಸಮೀಕ್ಷಾ ಕಾರ್ಯವನ್ನು ನಡೆಸಲು ರಾಯಚೂರು ಜಿಲ್ಲೆಯಲ್ಲಿ ಸ್ಥಾಪಿಸಲಾಗಿದೆ.

**ಭೌತಿಕ ಪ್ರಗತಿ**

| ವರ್ಷ | ಪರೀಕ್ಷಿಸಲ್ಪಟ್ಟ ಜನರು | ಮೈಕ್ರೋಫೈಲೇರಿ ಪತ್ತೆ ಪ್ರಕರಣ | ರೋಗದ ಬಾಹ್ಯ ಲಕ್ಷಣವನ್ನುಳ್ಳವರ ಸಂಖ್ಯೆ | ಚಿಕಿತ್ಸೆ ನೀಡಿದ ಸಂಖ್ಯೆ |
|---|---|---|---|---|
| 1993-94 | 137606 | 1520 | 5240 | 6378 |

## ಅತಿಸಾರ ರೋಗ ಮತ್ತು ಸಾಂಕ್ರಾಮಿಕ ರೋಗ ನಿಯಂತ್ರಣ ಕಾರ್ಯಕ್ರಮ

**ಪೀಠಿಕೆ :**

ಸಾಂಕ್ರಾಮಿಕ ರೋಗಗಳಾದ ನಾರುಹುಣ್ಣು ನಿಯಂತ್ರಣ ಕಾರ್ಯಕ್ರಮ, ಕರಳುಬೇನೆ ಮತ್ತು ಕಾಲರಾ ನಿಯಂತ್ರಣ ಕಾರ್ಯಕ್ರಮ, ಮೆದಳು ಜ್ವರ ನಿಯಂತ್ರಣ ಕಾರ್ಯಕ್ರಮ, ಮಂಗನ ಖಾಯಿಲೆ ನಿಯಂತ್ರಣ ಕಾರ್ಯಕ್ರಮ ಮತ್ತು ಇತರೆ ಸಾಂಕ್ರಾಮಿಕ ರೋಗಗಳ ಖಾಯಿಲೆ, ವಿಷಮ ಶೀತ ಜ್ವರ ಮತ್ತು ಹಂದಿಗೋಡು ಸಿಂಡ್ರೋಮ್ ಖಾಯಿಲೆ, ಮುಂತಾದ ಕಾರ್ಯಕ್ರಮಗಳನ್ನೊಳಗೊಂಡಿದೆ.

**ನಾರುಹುಣ್ಣು ನಿಯಂತ್ರಣ ಕಾರ್ಯಕ್ರಮ (ಕೇಂದ್ರ ಪುರಸ್ಕೃತ ಯೋಜನೆ)**

ನಾರುಹುಣ್ಣು ನಿಯಂತ್ರಣ ಕಾರ್ಯಕ್ರಮವವು ಕರ್ನಾಟಕ ರಾಜ್ಯದಲ್ಲಿ 1981-82ರ ಸಾಲಿನಲ್ಲಿ 50:50 ಪ್ರಮಾಣದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ವತಿಯಿಂದ ಪ್ರಾರಂಭವಾಯಿತು. ರಾಜ್ಯದ 20 ಜಿಲ್ಲೆಗಳ ಪೈಕಿ, 8 ಜಿಲ್ಲೆಗಳು ಎಂದರೆ, ಬಳ್ಳಾರಿ, ರಾಯಚೂರು, ಗುಲ್ಬರ್ಗಾ, ಬೀದರ್, ಧಾರವಾಡ, ಉತ್ತರ ಕನ್ನಡ, ಬೆಳಗಾವಿ ಮತ್ತು ಬಿಜಾಪುರ ರೋಗಗ್ರಸ್ಥ ಜಿಲ್ಲೆಗಳಾಗಿದ್ದು, ಹಾಲಿನಾರುಹುಣ್ಣು ಪ್ರಕರಣಗಳು ಗುಲ್ಬರ್ಗಾ ರಾಯಚೂರು ಮತ್ತು ವಿಜಾಪುರ ಜಿಲ್ಲೆಗಳಲ್ಲಿ ಮಾತ್ರ ವರದಿಯಾಗಿರುತ್ತದೆ.

**ಈ ಕಾರ್ಯಕ್ರಮದ ಮುಖ್ಯ ಉದ್ದೇಶಗಳು ಈ ಕೆಳಕಂಡಂತಿರುತ್ತವೆ.**

1. ಗ್ರಾಮಾಂತರ ಮಟ್ಟದಲ್ಲಿ ಶೂನ್ಯ ಪ್ರಕರಣವನ್ನು ಸಾಧಿಸಲು ಈ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದು.
2. ರೋಗವಿರುವ ಗ್ರಾಮದಲ್ಲಿನ ಸುರಕ್ಷಿತವಲ್ಲದ ಕುಡಿಯುವ ನೀರಿನ ಮೂಲಗಳನ್ನು ಗುರುತಿಸುವುದು.
3. ಸುರಕ್ಷಿತವಲ್ಲದ ನೀರಿನ ಮೂಲಗಳನ್ನು ಟಿಮೋಫಾಸ್‌ನಿಂದ ಶುದ್ಧಗೊಳಿಸುವುದು.
4. ರೋಗಿಗಳಿಗೆ ಹುಣ್ಣು ಮುಚ್ಚುವ ಪಟ್ಟಿಗಳನ್ನು ಒದಗಿಸುವುದು.

5. ರೋಗ ಪ್ರಭಾವ ಬೀರಿದ ಪ್ರದೇಶಗಳಲ್ಲಿ ಪ್ರಕರಣಗಳ ಮೇಲ್ವಿಚಾರಣೆಗೆ ಸಾಕಷ್ಟು ನಿಗಾ ವಹಿಸುವುದು.

6. ಆರೋಗ್ಯ ಶಿಕ್ಷಣದ ಕಾರ್ಯ ಚಟುವಟಿಕೆಗಳನ್ನು ಚುರುಕುಗೊಳಿಸುವುದು.

**ಭೌತಿಕ ಪ್ರಗತಿ**

1993-94ನೇ ಸಾಲಿನ ನಾರುಹುಣ್ಣು ಪ್ರಕರಣಗಳು ಈ ಕೆಳಕಂಡಂತೆ ಇವೆ.

| ಕ್ರ. ಸಂ. | ಜಿಲ್ಲೆಯ ಹೆಸರು | ನಾರುಹುಣ್ಣು ಕಂಡುಬಂದ ಗ್ರಾಮಗಳ ಸಂಖ್ಯೆ | ನಾರುಹುಣ್ಣು ಪ್ರಕರಣಗಳು |
|---|---|---|---|
| 1 | ವಿಜಾಪುರ | 8 | 8 |
| 2. | ಗುಲ್ಬರ್ಗಾ | 17 | 1 |
| 3. | ರಾಯಚೂರು | 26 | 9 |
| | **ಒಟ್ಟು** | **51** | **18** |

**ಆರ್ಥಿಕ ಪ್ರಗತಿ**

| | | |
|---|---|---|
| 1. | ವರ್ಷ | 1993-94 |
| 2. | ಆಯವ್ಯಯ ಬಿಡುಗಡೆ | 3.00 ಲಕ್ಷ ರೂ.ಗಳು |
| 3. | ವೆಚ್ಚ | 2.36 ಲಕ್ಷ ರೂ.ಗಳು |

**ಕರುಳುಬೇನೆ ಮತ್ತು ಕಾಲರಾ**

ಕರ್ನಾಟಕ ರಾಜ್ಯದಲ್ಲಿ ಕರಳುಬೇನೆ ಮತ್ತು ಕಾಲರಾ ರೋಗಗಳು ಎಲ್ಲಾ ಕಾಲದಲ್ಲಿ ಸಾಮಾನ್ಯವಾಗಿ ಕಾಣಿಸಿಕೊಳ್ಳುವ ರೋಗಗಳು. ಈ ಖಾಯಿಲೆಗಳನ್ನು ನಿಯಂತ್ರಿಸಲು ಕರ್ನಾಟಕ ಸರ್ಕಾರ 5 ಜಿಲ್ಲೆಗಳಲ್ಲಿ ಕಾಲರ ನಿಯಂತ್ರಣ ಜಾಗ್ರತ ತಂಡಗಳನ್ನು ಮಂಜೂರು ಮಾಡಿದೆ. ಈ ತಂಡಗಳನ್ನು ಕರ್ನಾಟಕ ರಾಜ್ಯದಲ್ಲಿ ಗುಲ್ಬರ್ಗಾ ವಿಭಾಗದ ಗುಲ್ಬರ್ಗಾ, ಬಳ್ಳಾರಿ, ಬೆಳಗಾವಿ ವಿಭಾಗದ ವಿಜಾಪುರ, ಬೆಂಗಳೂರು ವಿಭಾಗದ ಚಿತ್ರದುರ್ಗ, ಮೈಸೂರು ವಿಭಾಗದ ಮೈಸೂರುಗಳಲ್ಲಿ ಸೃಜಿಸಲಾಗಿದೆ. ಈ ನಿಯಂತ್ರಣ ಜಾಗೃತ ತಂಡದಲ್ಲಿ ಒಬ್ಬ ವೈದ್ಯಾಧಿಕಾರಿ ಮತ್ತು ಇತರೇ ವೈದ್ಯೇತರ ಸಿಬ್ಬಂದಿಗಳನ್ನು ನಿಯುಕ್ತಿಸಿ ರೋಗಗ್ರಸ್ಥ ಸ್ಥಳಗಳಿಗೆ ಭೇಟಿ ಕೊಡಲು ವಾಹನವನ್ನು ಒದಗಿಸಲಾಗಿದೆ. ರೋಗಗಳು ಕಾಣಿಸಿಕೊಂಡ ಸಂಧರ್ಭಗಳಲ್ಲಿ ಕಾಲರಾ ನಿಯಂತ್ರಣ ಜಾಗೃತ ತಂಡಗಳು ಭೇಟಿಕೊಟ್ಟು ರೋಗ ನಿಯಂತ್ರಣ ಮತ್ತು ನಿವಾರಣಾ ಕ್ರಮಗಳನ್ನು ಕೈಗೊಳ್ಳುತ್ತವೆ.

ಅಕ್ಟೋಬರ್ ಮತ್ತು ನವೆಂಬರ್ 1993ರಲ್ಲಿ ಅತಿವೃಷ್ಟಿ ಮತ್ತು ಪ್ರವಾಹಗಳಿಂದ ಸಾಂಕ್ರಾಮಿಕ ರೋಗಗಳು ಗುಲ್ಬರ್ಗಾ, ಬೀದರ್, ವಿಜಾಪುರ, ಧಾರವಾಡ, ರಾಯಚೂರು, ಬೆಳಗಾವಿ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಾಲರಾ ಮತ್ತು ಕರುಳುಬೇನೆ ಪ್ರಕರಣಗಳು ವರದಿಯಾಗಿವೆ.

ಮುಂಜಾಗರೂಕತೆ ಕಾರ್ಯಕ್ರಮಗಳಾದ ಚಿಲುವೆಪುಡಿಯಿಂದ ಕುಲುಷಿತ ನೀರನ್ನು ಶುದ್ಧೀಕರಿಸುವುದು, ಕಾಲರಾ ಮತ್ತು ಅತಿಸಾರ ರೋಗಿಗಳಿಗೆ ಚಿಕಿತ್ಸೆ ನೀಡುವುದು, ಕಾಲರಾ ವಿರುದ್ಧ ಚುಚ್ಚು ಮದ್ದು ನೀಡುವುದು, ಬಾಯಿ ಮೂಲಕ ನೀಡುವ ಪುನರ್ಜಲೀಕರಣ ಲವಣಪೊಟ್ಟಣಗಳ ಹಂಚಿಕೆ, ಮನೆಗಳಿಗೆ ಕ್ರಿಮಿನಾಶಕ ಸಿಂಪಡಣೆ ಕಾರ್ಯಕ್ರಮಗಳನ್ನು ಕೈಗೊಳ್ಳಲಾಯಿತು.

ಆಕಾಶವಾಣಿ, ದೂರದರ್ಶನ, ಕರಪತ್ರ, ಪೋಸ್ಟರ್, ಮೈಕ್ರೋಫೋನ್, ಮುಂತಾದವುಗಳ ಮೂಲಕ ಸಾರ್ವಜನಿಕರಿಗೆ ಆರೋಗ್ಯ ಶಿಕ್ಷಣವನ್ನು ನೀಡಲಾಯಿತು.

**ಭೌತಿಕ ಪ್ರಗತಿ**

1993-94ನೇ ಸಾಲಿನಲ್ಲಿ ಕರುಳುಬೇನೆ ಮತ್ತು ಕಾಲರಾ ಪ್ರಕರಣಗಳು ಈ ಕೆಳಕಂಡಂತಿವೆ.

| ಕರುಳುಬೇನೆ | | ಕಾಲರಾ | | ಕಾಲರಾ ಚುಚ್ಚು ಮದ್ದು |
|---|---|---|---|---|
| ಹರಡಿದ್ದು | ಮರಣ | ಹರಡಿದ್ದು | ಮರಣ | ನೀಡಿದ್ದು |
| 31,171 | 714 | 369 | 14 | 23,26,487 |

**ಕಾಮಾಲೆ**

ಈ ರೋಗವು ಅತಿಸಾರ ರೋಗಕ್ಕೆ ನೇರ ಸಂಬಂಧವಿರುವುದಿಲ್ಲ. ಆದರೆ ಇದು ನೀರು ಮತ್ತು ಆಹಾರದ ಮಲಿನತೆಯಿಂದ ಉಂಟಾಗುವ ಖಾಯಿಲೆಯಾಗಿರುತ್ತದೆ.

1993-94ನೇ ಸಾಲಿನಲ್ಲಿ ಕಾಮಾಲೆ ಪ್ರಕರಣಗಳು ಈ ಕೆಳಕಂಡಂತೆ ಇವೆ.

| ಹರಡಿದ್ದು | ಮರಣ |
|---|---|
| 874 | 7 |

**ವಿಷಮಶೀತಜ್ವರ**

ವಿಷಮಶೀತಜ್ವರವು ಸಾಂಕ್ರಾಮಿಕ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ.

1993-94ನೇ ಸಾಲಿನಲ್ಲಿ ವಿಷಮಶೀತಜ್ವರದ ಪೂರಕಗಳು ಈ ಕೆಳಕಂಡಂತೆ ಇವೆ.

| ಪ್ರಕರಣಗಳು | ಮರಣ |
|---|---|
| 617 | 4 |

ಮುಂಜಾಗ್ರತಾ ಕ್ರಮವಾಗಿ ಜ್ವರಪೀಡಿತ ಹಳ್ಳಿ ಹಾಗೂ ಪಟ್ಟಣ ಪ್ರದೇಶಗಳಲ್ಲಿ ಚಲುವೆಪುಡಿಯಿಂಚ ನೀರಿನ ಶುದ್ಧೀಕರಣ ಮತ್ತು ಮನೆ ನೊಣ ನಿಯಂತ್ರಣ ಕಾರ್ಯಯಕ್ರಮಗಳನ್ನು ಕೈಗೊಳ್ಳಲಾಯಿತು.

**ಆರ್ಥಿಕ ಪ್ರಗತಿ**

ಅತಿಸಾರ ರೋಗ ನಿಯಂತ್ರಣಾ ಕಾರ್ಯಕ್ರಮದಡಿಯಲ್ಲಿ ಔಷಧಿ ಮತ್ತು ಕ್ರಿಮಿನಾಶಕಗಳನ್ನು ಖರೀದಿಸಿ ರೋಗಪೀಡಿತ ಜಿಲ್ಲೆಗಳಿಗೆ ಸರ್ಕಾರಿ ಔಷಧ ಮಳಿಗೆ ಮೂಲಕ ಒದಗಿಸಲು ರಾಜ್ಯ ಸರ್ಕಾರವು 10 ಲಕ್ಷರೂ. ಗಳನ್ನು ಒದಗಿಸಿದೆ.

**ಮೆದುಳು ಜ್ವರ**

ಈ ರೋಗವು ಸಾಮಾನ್ಯವಾಗಿ ತುಮಕೂರು, ಮಂಡ್ಯ ಕೋಲಾರ, ಚಿತ್ರದುರ್ಗ, ರಾಯಚೂರು, ಬಳ್ಳಾರಿ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಕಂಡು ಬಂದಿರುತ್ತದೆ.

**ಭೌತಿಕ ಪ್ರಗತಿ**

1993-94ನೇ ಸಾಲಿನಲ್ಲಿ ಬಳ್ಳಾರಿ, ಕೋಲಾರ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಮಾತ್ರ ಮೆದುಳು ಜ್ವರದ ಪ್ರಕರಣಗಳು ವರದಿಯಾಗಿರುತ್ತವೆ.

| ಅನುಮಾನಾಸ್ಪದ ಪ್ರಕರಣಗಳು | | ದೃಢಪಟ್ಟ ಪ್ರಕರಣಗಳು | |
|---|---|---|---|
| ಹರಡಿದ್ದು | ಮರಣ | ಹರಡಿದ್ದು | ಮರಣ |
| 292 | 67 | 83 | 17 |

ಈ ಮೆದುಳು ಜ್ವರದ ಪ್ರಕರಣಗಳನ್ನು ಹತೋಟಿಗೆ ತರಲು ಎಲ್ಲಾ ಜಿಲ್ಲಾ ಆಸ್ಪತ್ರೆಗಳಲ್ಲಿ ರೋಗಿಗಳಿಗೆ ಚಿಕಿತ್ಸೆ ನೀಡಲು ಎಲ್ಲಾ ಸೌಕರ್ಯಗಳನ್ನು ಒದಗಿಸಲಾಗಿದೆ. ಮುಂಜಾಗ್ರತೆ ಕ್ರಮವಾಗಿ ಸ್ಥಳೀಯ ಸಂಸ್ಥೆಗಳ ಸಹಾಯದಿಂದ ಹಂದಿಗಳನ್ನು ವಾಸಸ್ಥಳದಿಂದ ದೂರ ಸಾಗಿಸಲು ಕ್ರಮ ಕೈಗೊಳ್ಳಲಾಗಿದೆ.

**ಆರ್ಥಿಕ ಪ್ರಗತಿ**

1993-94ನೇ ಸಾಲಿನಲ್ಲಿ ರಾಜ್ಯ ಸರ್ಕಾರವು ರೋಗಪೀಡಿತ ಜಿಲ್ಲೆಗಳಿಗೆ ಔಷಧಿ ಮತ್ತು ಕ್ರಿಮಿನಾಶಕಗಳನ್ನು ಖರೀದಿಸಿ ಸರ್ಕಾರಿ ಔಷಧಿ ಮಳಿಗೆ ಮೂಲಕ ಸರಬರಾಜು ಮಾಡಲು ಒಂದು ಲಕ್ಷ ರೂ.ಗಳನ್ನು ಒದಗಿಸಿದೆ.

| ಆಯವ್ಯಯ ಬಿಡುಗಡೆ (ಲಕ್ಷ ರೂ.ಗಳಲ್ಲಿ) | ವೆಚ್ಚ (ಲಕ್ಷ ರೂ.ಗಳಲ್ಲಿ) |
|---|---|
| 1.00 | 1.00 |

## ಕ್ಯಾಸನೂರು ಅರಣ್ಯ ಖಾಯಿಲೆ

ಈ ಖಾಯಿಲೆಯು ಶಿವಮೊಗ್ಗ, ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಸ್ಥಾನಿಕವಾಗಿರುತ್ತದೆ.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ, ಹೊಸನಗರ ಮತ್ತು ಸೊರಬ ತಾಲ್ಲೂಕುಗಳಲ್ಲಿಯೂ, ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ, ಭಟ್ಕಳ, ಕುಮುಟಾ, ಅಂಕೋಲಾ, ಸೂಪಾ ಮತ್ತು ಯಲ್ಲಾಪುರ ತಾಲ್ಲೂಕುಗಳಲ್ಲಿಯೂ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕುಗಳಲ್ಲಿಯೂ ಹಾಗೂ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನಲ್ಲಿ ಈ ರೋಗವು ಕಾಣಿಸಿಕೊಂಡಿರುತ್ತದೆ. ಶಿವಮೊಗ್ಗದ ಸೂಕ್ಷ್ಮಾಣು ಜೀವಿ ಸಂಶೋಧನಾ ಪ್ರಯೋಗಾಲಯವು ಎರಡು ಕ್ಷೇತ್ರ ಘಟಕಗಳ (ಸಾಗರ ಮತ್ತು ಹೊನ್ನಾವರ) ನೆರವಿನಿಂದ ಕಾರ್ಯನಿರ್ವಹಿಸುತ್ತಿದೆ.

ಇದಲ್ಲದೆ ಎರಡು ಕ್ಷೇತ್ರ ಘಟಕಗಳ ಸಿಬ್ಬಂದಿ ಮತ್ತು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿಯ ಕ್ಷೇತ್ರ ಸಿಬ್ಬಂದಿಯು ರೋಗವನ್ನು ಪತ್ತೆ ಹಚ್ಚುವುದು, ಚಿಕಿತ್ಸೆ ನೀಡುವುದು ಮತ್ತು ಮುಂಜಾಗರೂಕತಾ ಕ್ರಮಗಳಾದ ನಿಗಾವಣಾ ಕಾರ್ಯಚಟುವಟಿಕೆಗಳನ್ನು ನಡೆಸುತ್ತಿವೆ.

## ಭೌತಿಕ ಪ್ರಗತಿ

1993-94ನೇ ಸಾಲಿನಲ್ಲಿ ವರದಿಯಾದ ಕ್ಯಾಸನೂರು ಅರಣ್ಯ ಖಾಯಿಲೆ ಪ್ರಕರಣಗಳು ಈ ಕೆಳಕಂಡಂತಿರುತ್ತವೆ.

| ಅನುಮಾನಾಸ್ಪದ | | ಖಚಿತಗೊಂಡ | |
|---|---|---|---|
| ಪ್ರಕರಣಗಳು | ಮರಣಗಳು | ಪ್ರಕರಣಗಳು | ಮರಣಗಳು |
| 431 | 2 | 83 | 2 |

ಶಿವಮೊಗ್ಗ ಸೂಕ್ಷ್ಮಾಣುಜೀವಿ ಸಂಶೋಧನಾ ಪ್ರಯೋಗಶಾಲೆಯಲ್ಲಿ ಪರೀಕ್ಷಣೆಗೆ ಒಳಗೊಂಡ ಮಾದರಿಗಳ ಫಲಿತಾಂಶ.

| ಮಾದರಿ | ರೋಗಿಯ ರಕ್ತ ಯಿಂದ ಖಚಿತಗೊಂಡ ಶೇಖರಿಸಿದ್ದು | ಮಾದರಿಗಳ ಪರೀಕ್ಷೆ ಪ್ರಕರಣಗಳು ಪರೀಕ್ಷಿಸಿದ್ದು | ಖಾಯಿಲೆ ಸ್ಥಿರೀಕರಿಸಿದ್ದು |
|---|---|---|---|
| ಮಾನವ | 431 | 431 | 83 |
| ಮಂಗ | 54 | 54 | ಇಲ್ಲ |

ಮಂಗನ ಖಾಯಿಲೆ ಪ್ರಾರಂಭವಾಗುವ ಪೂರ್ವಾವಧಿಯಲ್ಲಿ ಜಾನುವಾರುಗಳ ಮೇಲೆ ಕೀಟನಾಶಕಗಳ ಮುಖಾಂತರ ಉಣ್ಣೆ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.

ಪಶುವೈದ್ಯ ಮತ್ತು ಪಶುಪಾಲನಾ ಇಲಾಖೆ, ಇತರ ಇಲಾಖೆ ಮತ್ತು ಸ್ಥಳೀಯ ಜನರ ಸಹಕಾರದಿಂದ ಈ ಕಾರ್ಯಕ್ರಮವನ್ನು ಕೈಗೊಳ್ಳಲಾಗುತ್ತಿದೆ.

### ಹಂದಿಗೋಡು ಖಾಯಿಲೆ

ಈ ವಿಚಿತ್ರ ಖಾಯಿಲೆಯು ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಯ ಗ್ರಾಮೀಣ ಹರಿಜನ ಕುಟುಂಬಗಳಲ್ಲಿ ಕಾಣಿಸಿಕೊಂಡಿರುತ್ತದೆ. ರೋಗಿಗಳು ವಿವಿಧ ಹಂತದ ಕೀಲುಗಳ ವಿಕೃತ ರೂಪದಿಂದ ನರಳುತ್ತಾರೆ.

ಈ ಪ್ರಕರಣಗಳಿಗೆ ಚಿಕಿತ್ಸೆಯನ್ನು ಅದರ ಲಕ್ಷಣಗಳಿಗೆ ಅನುಸಾರವಾಗಿ ಚಿಕಿತ್ಸೆ ನೀಡಲಾಗುತ್ತಿದೆ. ಮತ್ತು ಪುನರ್ ವಸತಿ ಕಾರ್ಯಗಳನ್ನು ಒದಗಿಸಲಾಗುತ್ತಿದೆ. ಐ.ಸಿ.ಎಂ.ಆರ್.ನ ಸಂಸ್ಥೆಯ ಸಿಬ್ಬಂದಿಯನ್ನು ಈ ಕಾರ್ಯಕ್ರಮದಲ್ಲಿ ಮುಂದುವರಿಸಲಾಗಿದೆ.

1993-94ನೇ ಸಾಲಿನಲ್ಲಿ ಹಂದಿಗೋಡು ಖಾಯಿಲೆಯಿಂದ ನರಳುತ್ತಿರುವ ರೋಗಿಗಳ ಅಂಕಿಅಂಶಗಳು ಈ ಕೆಳಗೆ ನಮೂದಿಸಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆಗಳು | ಗ್ರಾಮಗಳು | ಪ್ರಕರಣಗಳ ಸಂಖ್ಯೆ |
|---|---|---|---|
| 1. | ಶಿವಮೊಗ್ಗ | 49 | 349 |
| 2. | ಚಿಕ್ಕಮಗಳೂರು | 30 | 262 |
| | ಒಟ್ಟು | 79 | 611 |

## ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮ

ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮದಲ್ಲಿ ಬರುವ ಎಲ್ಲಾ ಕಾರ್ಯ ಚಟುವಟಿಕೆಗಳಲ್ಲಿ ಮೇಲ್ವಿಚಾರಣೆ ಹಾಗೂ ಮಾರ್ಗದರ್ಶನ ನೀಡಲು ರಾಜ್ಯಮಟ್ಟದಲ್ಲಿ ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮದಡಿಯಲ್ಲಿ ರಾಜ್ಯದಲ್ಲಿ ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆ, ಭಾರತ ಸರ್ಕಾರ ಇವರ ಮಾರ್ಗಸೂಚಿಯಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಕಾರ್ಯಕ್ರಮವು ಶೇಕಡಾ ನೂರರಷ್ಟು ರಾಷ್ಟ್ರೀಯ ಪುರಸ್ಕೃತ ಯೋಜನೆಯಲ್ಲಿ ಬರುತ್ತದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿ ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮದ ವಿವಿಧ ಚಟುವಟಿಕೆಗಳ ಉಸ್ತುವಾರಿ ಮತ್ತು ಮೇಲ್ವಿಚಾರಣೆಗಾಗಿ ರಾಜ್ಯ ಏಡ್ಸ್ ಸೆಲ್‌ಅನ್ನು ಮೇ 92 ರಲ್ಲಿ ಸ್ಥಾಪಿಸಲಾಯಿತು. ರಾಜ್ಯ ಮಟ್ಟದಲ್ಲಿ ರಾಷ್ಟ್ರೀಯ ಏಡ್ಸ್ ನಿಯಂತ್ರಣಾ ಕಾರ್ಯಕ್ರಮದಡಿಯಲ್ಲಿ ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಮಟ್ಟದ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿದೆ.

## ಸರ್ವೆಲೆನ್ಸ್ ಮತ್ತು ಕ್ಲಿನಿಕಲ್ ಮ್ಯಾನೇಜ್‌ಮೆಂಟ್

ರಾಜ್ಯದಲ್ಲಿ 3 ಏಡ್ಸ್ ಸರ್ವೆಲೆನ್ಸ್ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಈ ಕೇಂದ್ರಗಳು ಸರ್ವೆಲೆನ್ಸ್ ಮತ್ತು ಸೆಂಟಿನಲ್ ಸರ್ವೆಲೆನ್ಸ್ ಕಾರ್ಯಚಟುವಟಿಕೆಗಳನ್ನು ನಡೆಸುತ್ತವೆ. ಏಡ್ಸ್ ರೋಗವನ್ನು ಪತ್ತೆ ಹಚ್ಚಲು ಹಾಗೂ ಚಿಕಿತ್ಸೆ ನೀಡಲು ಇಬ್ಬರು ವೈದ್ಯರುಗಳನ್ನು ರಾಜ್ಯ ಮಟ್ಟದಲ್ಲಿ ಗುರುತಿಸಲಾಗಿದೆ. ಇವರುಗಳಿಗೆ ರಾಷ್ಟ್ರೀಯ ಮಟ್ಟದಲ್ಲಿ ರಾಜ್ಯ ಏಡ್ಸ್ ನಿಯಂತ್ರಣ ಸಂಸ್ಥೆ: ವಿಶ್ವ ಆರೋಗ್ಯ ಸಂಸ್ಥೆ ಇವರಿಂದ ತರಬೇತಿ ನೀಡಲಾಗಿದೆ.

## ರಕ್ತ ಸುರಕ್ಷತೆ ಕಾರ್ಯಕ್ರಮ

ರಾಜ್ಯದಲ್ಲಿ 9 ವಿಭಾಗೀಯ ರಕ್ತ ತಪಾಸಣೆ ಕೇಂದ್ರಗಳನ್ನು ಸ್ಥಾಪಿಸಲಾಗಿದೆ, ಮತ್ತು ಅವು ಕಾರ್ಯನಿರ್ವಹಿಸುತ್ತಿವೆ. ಎಲ್ಲಾ ಸರ್ಕಾರಿ ರಕ್ತ ನಿಧಿಕೇಂದ್ರಗಳನ್ನು ಮತ್ತು ಖಾಸಗಿ ಮತ್ತು ಸ್ವಯಂ ಸೇವಾ ರಕ್ತನಿಧಿ ಕೇಂದ್ರಗಳನ್ನು ತಪಾಸಣೆ ಸಲುವಾಗಿ ವಿಭಾಗೀಯ ರಕ್ತ ತಪಾಸಣೆ ಕೇಂದ್ರಗಳಿಗೆ ಜೋಡಿಸಲಾಗಿದೆ. 92-93ನೇ ಸಾಲಿನಲ್ಲಿ 6 ರಕ್ತನಿಧಿ ಕೇಂದ್ರಗಳನ್ನು ಆಧುನೀಕರಿಸಲಾಗಿದೆ. ಉಳಿದಿರುವ ರಕ್ತನಿಧಿ ಕೇಂದ್ರಗಳನ್ನು ಹಂತ ಹಂತವಾಗಿ 94-95 ರಿಂದ ಆಧುನೀಕರಿಸಲಾಗುವುದು.

1994-95 ನೇ ಸಾಲಿನಲ್ಲಿ ರಕ್ತ ಕಣ ವಿಭಜನಾ ಕೇಂದ್ರಗಳನ್ನು ಕಿದ್ವಾಯಿ ಕ್ಯಾನ್ಸರ್ ಸಂಸ್ಥೆ, ಬೆಂಗಳೂರು ಇಲ್ಲಿ ಸ್ಥಾಪಿಸಲು ಕ್ರಮ ಕೈಗೊಳ್ಳಲಾಗಿದೆ.

## ಲೈಂಗಿಕ ರೋಗ ನಿಯಂತ್ರಣ ಕಾರ್ಯಕ್ರಮ

ರಾಜ್ಯದಲ್ಲಿ ಸರ್ಕಾರಿ ಆಸ್ಪತ್ರೆಗಳಲ್ಲಿ ಒಟ್ಟು 24 ಲೈಂಗಿಕ ಚಿಕಿತ್ಸಾಲಯಗಳು ಇದ್ದು, ಅವುಗಳ ಸೇವೆಗಳನ್ನು ಔಷಧಿ ಸಾಮಗ್ರಿಗಳನ್ನು ಮತ್ತು ಪ್ರಯೋಗಶಾಲೆ ಸಾಮಗ್ರಿಗಳನ್ನು ಹಾಗೂ ಸಲಕರಣೆಗಳನ್ನು ಒದಗಿಸಿ ಬಲಪಡಿಸಲಾಗಿದೆ.

## ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳು

ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆಯು ಒದಗಿಸಿರುವ ಆರೋಗ್ಯ ಶಿಕ್ಷಣ ಸಾಮಗ್ರಿಗಳನ್ನು ಕನ್ನಡ ಭಾಷೆಯಲ್ಲಿ ಭಾಷಾಂತರಿಸಿ, ಮುದ್ರಿಸಿ, ಜನಸಾಮಾನ್ಯರಲ್ಲಿ ಅರಿವು ಮೂಡಿಸುವುದಕ್ಕಾಗಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಹಾಗೂ ಜಿಲ್ಲಾ ಆಸ್ಪತ್ರೆಗಳಿಗೆ ಸರಬರಾಜು ಮಾಡಲಾಗಿದೆ. ಏಡ್ಸ್ ಮುಂಜಾಗರೂಕತೆ ಮತ್ತು ನಿಯಂತ್ರಣದ ಬಗೆಗಿನ 12 ಟೆಲಿವಿಷನ್ ಸ್ಪಾಟ್‌ಗಳು ಮತ್ತು 30 ರೇಡಿಯೋ ಸ್ಪಾಟ್ ಗಳನ್ನು ತಯಾರಿಸಿ, ಟೆಲಿವಿಷನ್ ಮತ್ತು ಆಕಾಶವಾಣಿ ಮೂಲಕ ಪ್ರಚಾರಪಡಿಸಲಾಗುತ್ತಿದೆ. ಹಾಗೂ 2 ನಮೂನೆಯ ಧ್ವನಿ ಸುರಳಿ ಕ್ಯಾಸೆಟ್‌ಗಳನ್ನು (ಹಾಡುಗಳು ಮತ್ತು ನಾಟಕಗಳು) ಪಡೆದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಪ್ರಚಾರಕ್ಕಾಗಿ ಸರಬರಾಜು ಮಾಡಲಾಗಿದೆ. ವಾರ್ತಾ ಮತ್ತು ಪ್ರಚಾರ ಇಲಾಖೆ ಮೂಲಕ ಏಡ್ಸ್ ಬಗ್ಗೆ ಮಾಹಿತಿಯನ್ನು ದಿನಪತ್ರಿಕೆಗಳ ಮೂಲಕ ಆಗಾಗ್ಗೆ ಪ್ರಚಾರಪಡಿಸಲಾಗುತ್ತಿದೆ.

## ತರಬೇತಿ ಕಾರ್ಯಕ್ರಮ

ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮದಡಿಯಲ್ಲಿ ಈ ಕೆಳಕಂಡ ವೈದ್ಯರುಗಳಿಗೆ ತರಬೇತಿ ನೀಡಲಾಗಿದೆ.

ಎ) ಜಿಲ್ಲಾ ಮಟ್ಟದ ವೈದ್ಯರುಗಳು ಮತ್ತು ಮಕ್ಕಳ ತಜ್ಞರು - 58

ಬಿ) ವೈದ್ಯಕೀಯ ವಿದ್ಯಾಲಯಗಳ ವೈದ್ಯರುಗಳು - 20

ಸಿ) ರಾಜ್ಯ ಮಟ್ಟದಲ್ಲಿ ಏಡ್ಸ್ ಬಗ್ಗೆ ಪತ್ತೆ ಹಚ್ಚುವ ಮತ್ತು ಚಿಕಿತ್ಸೆ ನೀಡುವ ಸಲುವಾಗಿ ಹಿರಿಯ ವೈದ್ಯರುಗಳು - 2

ಡಿ) ರಕ್ತ ಕಣ ವಿಭಜನಾ ಕೇಂದ್ರದ ವೈದ್ಯಾಧಿಕಾರಿಗಳು - 1

ಇ) ರಕ್ತನಿಧಿ ಕೇಂದ್ರಗಳ ಹಿರಿಯ ಪ್ರಯೋಗಾಲಯ ತಾಂತ್ರಿಕರು- 4

ರಾಜ್ಯದಲ್ಲಿ ರಾಷ್ಟ್ರೀಯ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ವಿಶ್ವ ವಿದ್ಯಾನಿಲಯಗಳ, ವಿದ್ಯಾಲಯಗಳ, ಉಪಾಧ್ಯಾಯರುಗಳು ಮತ್ತು ಯುವಕರುಗಳಿಗೆ ಏಡ್ಸ್ ಬಗ್ಗೆ ಮಾಹಿತಿ ನೀಡಲಾಗುತ್ತಿದೆ.

1987ರಿಂದ ಏಪ್ರಿಲ್ 1994ರ ಅಂತ್ಯದವರೆಗೆ ಒಟ್ಟು 3,33,518 ರಕ್ತ ಸ್ಯಾಂಪಲ್‌ಗಳನ್ನು ಪರೀಕ್ಷಿಸಲಾಗಿದೆ. ಅವುಗಳಲ್ಲಿ 1,353 ಹೆಚ್.ಐ.ವಿ. ಸೋಂಕು ತಗುಲಿರುವ ಪ್ರಕರಣಗಳನ್ನು ಪತ್ತೆ ಮಾಡಲಾಗಿದೆ. ಇವುಗಳಲ್ಲ 20 ಜನರಿಗೆ ಪೂರ್ಣ ಪ್ರಮಾಣದ ಏಡ್ಸ್ ರೋಗ ತಗುಲಿದ್ದು 17 ಜನರು ಸತ್ತಿರುತ್ತಾರೆ.

ಸೆಂಟಿನಲ್ ಸರ್ವೇಲೆನ್ಸ್ ಕಾರ್ಯಕ್ರಮವನ್ನು ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆ ಇವರ ಮಾರ್ಗಸೂಚನೆಯಲ್ಲಿ ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು ಮತ್ತು ಕರ್ನಾಟಕ ವೈದ್ಯಕೀಯ ಆಸ್ಪತ್ರೆ, ಹುಬ್ಬಳ್ಳಿ ಇಲ್ಲಿ ನಡೆಸಲಾಗುತ್ತಿದೆ.

ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆಯಿಂದ ಆರ್ಥಿಕ ಅನುದಾನ ಬಿಡುಗಡೆ ಮತ್ತು ವೆಚ್ಚದ ಮಾಹಿತಿ ಈ ಕೆಳಕಂಡಿಂತಿರುತ್ತದೆ.

| ವರ್ಷ | ಬಿಡುಗಡೆಯಾದ ಹಣ | ಖರ್ಚು | ಉಳಿದ ಹಣ | ಷರಾ |
|---|---|---|---|---|
| 1992-93 | 69.992 | 3.800 | 66.192 | ಉಳಿದ ಹಣವನ್ನು 93-94 ನೇ ಸಾಲಿಗೆ ಉಪಯೋಗಿಸಲು ಕ್ರಮ ಕೈಗೊಳ್ಳಲಾಗಿದೆ. |
| 1993-94 | 53.081 | 74.868 | 38.692 | ಉಳಿದ ಹಣವನ್ನು 94-95ನೇ ಸಾಲಿಗೆ ಉಪಯೋಗಿಸಲು ಕ್ರಮ ಕೈಗೊಳ್ಳಲಾಗಿದೆ. |

## ಆರೋಗ್ಯ ಶಿಕ್ಷಣ ಮತ್ತು ತರಬೇತಿ

ಈ ನಿರ್ದೇಶನಾಲಯದಲ್ಲಿರುವ ಆರೋಗ್ಯ ಶಿಕ್ಷಣ ಮತ್ತು ತರಬೇತಿ ವಿಭಾಗವು ಸೇವಾ ನಿರತ ಹಾಗೂ ಸೇವಾ ಪೂರ್ವ ಮತ್ತು ಮೂಲ ತರಬೇತಿ ನೀಡುವ ಜವಾಬ್ದಾರಿಯನ್ನು ಹೊಂದಿರುತ್ತದೆ. ಶ್ರವಣವೀಕ್ಷಕ ಆರೋಗ್ಯ ಶಿಕ್ಷಣಕ್ಕೆ ಬೇಕಾಗುವ ಉಪಕರಣಗಳ ಸಂಗ್ರಹಣೆ ಹಾಗೂ ಆರೋಗ್ಯ ಶಿಕ್ಷಣ ಸಾಮಗ್ರಿಗಳನ್ನು ತಯಾರಿಸಿ, ಮುದ್ರಿಸಿ ಸರಬರಾಜು ಮಾಡುವುದು ರಾಜ್ಯದಲ್ಲಿರುವ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಿಗೆ ಶಾಲಾ ಆರೋಗ್ಯ ಸೇವಾ ಸೌಲಭ್ಯಗಳನ್ನು ನೀಡುವುದು. ಮೈಸೂರು ದಸರಾದಂತಹ ದೊಡ್ಡ ವಸ್ತು ಪ್ರದರ್ಶನಗಳಲ್ಲಿ ಆರೋಗ್ಯ ಮಳಿಗೆಯನ್ನು ತೆರೆಯುವುದು ಮತ್ತು ಜಾತ್ರೆ, ಉತ್ಸವಗಳಲ್ಲಿ ಹಾಗೂ ಇತರೆ ಸ್ಥಳಗಳಲ್ಲಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಂದ ಆರೋಗ್ಯಕ್ಕೆ ಸಂಬಂಧಿಸಿದ ವಸ್ತು ಪ್ರದರ್ಶನಗಳನ್ನು ವ್ಯವಸ್ಥೆಗೊಳಿಸುವುದು. ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಶಾಲಾ ಆರೋಗ್ಯ ಸೇವೆ ಒದಗಿಸುವುದು, ಆರೋಗ್ಯ ಶಿಕ್ಷಣ ನೀಡುವುದು, ಆರೋಗ್ಯ ಶಿಕ್ಷಣ ಸಾಮಾಗ್ರಿಗಳನ್ನು ಆಯ್ದ ಕ್ಷೇತ್ರಗಳಲ್ಲಿ ಕ್ಷೇತ್ರ ಪರೀಕ್ಷೆ ನಡೆಸುವುದು. ಶಾಲಾ ಶಿಕ್ಷಕರಿಗೆ ತರಬೇತಿ ನೀಡುವುದು, ಮಾರ್ಗದರ್ಶನ ಮತ್ತು ಪ್ರಾತ್ಯಕ್ಷತೆಯನ್ನು ಆರೋಗ್ಯ ಕಾರ್ಯಕ್ರಮಗಳಲ್ಲಿ ಅಳವಡಿಸುವುದು.

### 1993-94ನೇ ಸಾಲಿನ ಕಾರ್ಯ ಚಟುವಟಿಕೆಗಳು

1. ದಿನಾಂಕ 7-4-9193ರಂದು "ಜೀವನವನ್ನು ಜಾಗರೂಕತೆಯಿಂದ ನಿರ್ವಹಿಸಿ, ಹಿಂಸೆ ಮತ್ತು ಆಲಕ್ಷತೆಯನ್ನು ತಡೆಗಟ್ಟಿ" ಎಂಬ ವಿಶ್ವ ಆರೋಗ್ಯ ದಿನಾಚರಣೆಯ ಘೋಷಣೆಯನ್ನು ಹೆಚ್ಚು ಉಪಯುಕ್ತ ರೀತಿಯಲ್ಲಿ ರಾಜ್ಯಮಟ್ಟ, ಜಿಲ್ಲಾ ಮಟ್ಟ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಆಚರಿಸಲಾಯಿತು. ರಾಜ್ಯದಲ್ಲಿ ಒಟ್ಟು 960 ಕಾರ್ಯಕ್ರಮಗಳ ವ್ಯವಸ್ಥೆಯನ್ನು ಮಾಡಲಾಗಿತ್ತು ಮತ್ತು 1023 ಚಿಕ್ಕ ವಸ್ತು ಪ್ರದರ್ಶನಗಳನ್ನು ವ್ಯವಸ್ಥೆಗೊಳಿಸಲಾಗಿತ್ತು.

### ವಸ್ತು ಪ್ರದರ್ಶನಗಳನ್ನು ಏರ್ಪಡಿಸಿದ್ದು

ದಿನಾಂಕ 16-10-93ರಿಂದ 13-12-93ರವರೆಗೆ ಆರೋಗ್ಯ ಮಳಿಗೆಯನ್ನು ಮೈಸೂರು ವಸ್ತು ಪ್ರದರ್ಶನದಲ್ಲಿ ತೆರೆಯಲಾಗಿತ್ತು. ತುಮಕೂರು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಿಗೆ ಸಿದ್ಧಗಂಗಾ ಜಾತ್ರೆಯಲ್ಲಿ ಆರೋಗ್ಯ ಮಳಿಗೆಯನ್ನು ತೆರೆಯಲು ತಾಂತ್ರಿಕ ನೆರವು, ಸಾಮಗ್ರಿಗಳನ್ನು ಮತ್ತು ಮಾರ್ಗದರ್ಶನವನ್ನು ನೀಡಲಾಯಿತು.

ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಜಿಗಣಿ ಮತ್ತು ಆನೇಕಲ್ ನಲ್ಲಿ ಚಿಕ್ಕ ವಸ್ತುಪ್ರದರ್ಶನಗಳನ್ನು "ಸರ್ಚ್" ಬೆಂಗಳೂರು, ಇವರು ವ್ಯವಸ್ಥೆಗೊಳಿಸಲು ತಾಂತ್ರಿಕ ಸಹಾಯ ಮತ್ತು ಸಾಮಗ್ರಿಗಳನ್ನು ಒದಗಿಸಲಾಯಿತು.

### 3. ಆರೋಗ್ಯ ಶಿಕ್ಷಣ ಸಾಮಾಗ್ರಿಗಳ ತಯಾರಿಕೆ, ಅಲ್ಪಾವಧಿ ಕಾಲದ ಯುಮ್ಯಾಟಿಕ್ ವೀಡಿಯೋ ಬಣ್ಣದ ಚಲನ ಚಿತ್ರಗಳನ್ನು ತಯಾರಿಸುವಿಕೆ.

1993 ವಿಶ್ವ ಆರೋಗ್ಯ ದಿನಾಚರಣೆಯ ಘೋಷಣೆಯಾದ "ಜೀವನವನ್ನು ಜಾಗರೂಕತೆಯಿಂದ ನಿರ್ವಹಿಸಿ, ಹಿಂಸೆ ಮತ್ತು ಆಲಕ್ಷತೆಯನ್ನು ತಡೆಗಟ್ಟಿ" ಎಂಬ ವಿಷಯಕ್ಕೆ

ಸಂಬಂಧಿಸಿದಂತೆ ಕಿರುಪುಸ್ತಕ, ಮಡಿಕೆ ಪತ್ರಗಳು, ಭಿತ್ತಿ ಪತ್ರಗಳು, ಅಂಟು ಪಟ್ಟಿಗಳು, ಸಂದೇಶಗಳು ಇತ್ಯಾದಿಗಳನ್ನು ತಯಾರಿಸಲಾಯಿತು. ಅಯೋಡಿನ್ ಕೊರತೆಯಿಂದ ಉಂಟಾಗುವ ನ್ಯೂನತೆಗಳು, ನೀರಿನಿಂದ ಬರುವ ರೋಗಗಳು, ಆಹಾರ ಕಲಬೆರಕೆ ತಡೆಗಟ್ಟುವಿಕೆ, ಮಂಗನ ಕಾಯಿಲೆ, ಧೂಮಪಾನ, ಶಾಲಾ ಆರೋಗ್ಯ ಕಾರ್ಯಕ್ರಮ, ಮೆದಳು ಜ್ವರ, ಪೌಷ್ಠಿಕ ಆಹಾರ ವಿಷಯಕ್ಕೆ ಸಂಬಂಧಿಸಿದಂತೆ, ಆರೋಗ್ಯ ಶಿಕ್ಷಣ ಸಾಮಗ್ರಿಗಳನ್ನು ತಯಾರಿಸಿ ಮುದ್ರಣ ಮಾಡಲಾಗುತ್ತಿದೆ.

ನೀರಿನಿಂದ ಬರುವ ಕಾಯಿಲೆಗಳು, ಆನೇಕಾಲು ರೋಗ, ಕುಷ್ಠರೋಗ ಮತ್ತು ಮೆದುಳು ಜ್ವರದ ಬಗ್ಗೆ 15 ನಿಮಿಷಗಳ ಕಾಲಾವಧಿಯ ಯು- ಮ್ಯಾಟಿಕ್ ವೀಡಿಯೋ ಚಿತ್ರಗಳನ್ನು ತಯಾರಿಸಲಾಗುತ್ತಿದೆ.

ಕುಷ್ಠರೋಗ ನಿರ್ಮೂಲನ ಸಂದೇಶಗಳನ್ನುಳ್ಳ ಫಲಕಗಳನ್ನು 16 ಸ್ಥಳಗಳಲ್ಲಿ ಪ್ರದರ್ಶಿಸಲು ಕ್ರಮ ಕೈಗೊಂಡಿದೆ.

**ತರಬೇತಿ**

ಒಂದು ವರ್ಷ ಅವಧಿಯ ಆರೋಗ್ಯ ಪರಿವೀಕ್ಷಕರ ತರಬೇತಿಯನ್ನು ತರಬೇತಿ ಹೊಂದದ ಸೇವಾ ನಿರತ ಕಿರಿಯ ಆರೋಗ್ಯ ಸಹಾಯಕರಿಗೆ (ಪುರುಷರು) ನೀಡಲಾಯಿತು. ಬೆಂಗಳೂರು, ಹುಬ್ಬಳ್ಳಿ, ಗುಲ್ಬರ್ಗಾ, ರಾಮನಗರ ಮತ್ತು ಮಂಡ್ಯ ಈ 5 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳಲ್ಲಿ ಮುಂದುವರಿದ ಶಿಕ್ಷಣ ಕಾರ್ಯಕ್ರಮದಡಿಯಲ್ಲಿ ವೈದ್ಯಾಧಿಕಾರಿಗಳಿಗೆ, ಕ್ಷೇತ್ರ ಆರೋಗ್ಯ ಶಿಕ್ಷಕರುಗಳಿಗೆ, ಹಿರಿಯ ಆರೋಗ್ಯ ಸಹಾಯಕರಿಗೆ (ಪುರುಷರು ಮತ್ತು ಮಹಿಳೆಯರು), ಕಿರಿಯ ಆರೋಗ್ಯ ಸಹಾಯಕರಿಗೆ (ಪುರುಷರು ಮತ್ತು ಮಹಿಳೆಯರು) 2 ವಾರಗಳ ಕಾಲ ತರಬೇತಿ ನೀಡಲಾಯಿತು. ರಾಷ್ಟ್ರೀಯ ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮದಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ವೈದ್ಯಾಧಿಕಾರಿಗಳಿಗೆ ಪ್ರಾಥಮಿಕ ಆರೋಗ್ಯ ಕೇಂದ್ರ, ಪ್ರಾಥಮಿಕ ಆರೋಗ್ಯ ಘಟಕಗಳಲ್ಲಿರುವ ವೈದ್ಯಾಧಿಕಾರಿಗಳಿಗೆ ಹಾಗೂ ವೈದ್ಯೇತರ ಸಿಬ್ಬಂದಿಗೆ 3 ರಿಂದ 5 ದಿನಗಳ ಅವಧಿಗೆ ಬೆಂಗಳೂರು, ಗುಲ್ಬರ್ಗಾ ಮತ್ತು ಹುಬ್ಬಳ್ಳಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರಗಳಲ್ಲಿ ತರಬೇತಿಯನ್ನು ನೀಡಲಾಯಿತು.

ಜಿಲ್ಲಾ ಆಸ್ಪತ್ರೆ, ಶಿವಮೊಗ್ಗ, ಹಾಸನ, ಕಾರವಾರ, ಬಿಜಾಪುರ, ಗುಲ್ಬರ್ಗಾ ಮತ್ತು ಬೀದರ್ ಗಳಲ್ಲಿ ಒಂದು ವರ್ಷ ಅವಧಿಯ ಕ್ಷ - ಕಿರಣ ತಂತ್ರಜ್ಞರ ತರಬೇತಿಯನ್ನು (ಸೇವಾಪೂರ್ವ) ನೀಡಲಾಯಿತು. ಈ ತರಬೇತಿಗೆ ಆಯ್ಕೆಯಾದ 36 ಅಭ್ಯರ್ಥಿಗಳಲ್ಲಿ 20 ಅಭ್ಯರ್ಥಿಗಳು ತರಬೇತಿಯನ್ನು ಮುಗಿಸಿಕೊನೆಯ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುತ್ತಾರೆ.

1993-94ನೇ ಸಾಲಿನಲ್ಲಿ ಅನೇಕ ಕಾರ್ಯಕ್ರಮಗಳ ಅಡಿಯಲ್ಲಿ ನಡೆಸಿದ ತರಬೇತಿ ಕಾರ್ಯ ಚಟುವಟಿಕೆಗಳ ಪ್ರಗತಿಯು ಕೆಳಕಂಡಂತಿದೆ.

## 1993-94ನೇ ಸಾಲಿನ ತರಬೇತಿ ಕಾರ್ಯ ಚಟುವಟಿಕೆ.

**ಮುಂದುವರಿದ ಶಿಕ್ಷಣ**

| ಕ್ರಮ ಸಂಖ್ಯೆ | ವರ್ಗ | ತರಬೇತಿ ಪಡೆದ ವ್ಯಕ್ತಿಗಳ ಸಂಖ್ಯೆ |
|---|---|---|
| 1. | ವೈದ್ಯಾಧಿಕಾರಿಗಳು | 231 |
| 2. | ಮಹಿಳಾ ವೈದ್ಯಾಧಿಕಾರಿಗಳು | 35 |
| 3 | ಕ್ಷೇತ್ರ ಆರೋಗ್ಯ ಶಿಕ್ಷಕರು | 54 |
| 4. | ಕ್ಷೇತ್ರ ಆರೋಗ್ಯ ಶಿಕ್ಷಕರು (ಚೇತನ) | 75 |
| 5. | ಹಿರಿಯ ಆರೋಗ್ಯ ಸಹಾಯಕಯರು (ಪು) | 200 |
| 6. | ಹಿರಿಯ ಆರೋಗ್ಯ ಸಹಾಯಕಿಯರು (ಮ) | 249 |
| 7. | ಕಿರಿಯ ಆರೋಗ್ಯ ಸಹಾಯಕರು (ಪು) | 131 |
| 8. | ಕಿರಿಯ ಆರೋಗ್ಯ ಸಹಾಯಕಿಯರು (ಮ) | 145 |
| **ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ** | | |
| | ಓರಿಯಂಟೇಷನ್ ತರಬೇತಿ | |
| 1. | ವೈದ್ಯಧಿಕಾರಿಗಳು (3 ದಿನಗಳ ಕಾಲ) | 528 |
| 2. | ಅರೆ ವೈದ್ಯಕೀಯ ಮೇಲ್ವಿಚಾರಕರು | 39 |
| 3. | ಜಿಲ್ಲಾ ಕುಷ್ಠ ರೋಗ ಅಧಿಕಾರಿಗಳು ಮತ್ತು ವೈದ್ಯಾಧಿಕಾರಿಗಳು (7 ದಿನಗಳ ಕಾಲ) | 9 |
| **ಸೇವೆಯಲ್ಲಿರುವವರಿಗೆ ಮೂಲ ತರಬೇತಿ** | | |
| | ತರಬೇತಿ ಹೊಂದಿದ ಕಿರಿಯ ಆರೋಗ್ಯ ಸಹಾಯಕರಿಗೆ (ಪು) ಆರೋಗ್ಯ ಪರಿವೀಕ್ಷಕರ ತರಬೇತಿ | 370 |
| **ಸೇವಾ ಪೂರ್ವ ಮೂಲ ತರಬೇತಿ** | | |
| | ಕ್ಷ - ಕಿರಣ ತಂತ್ರಜ್ಞರ ತರಬೇತಿ (ಒಂದು ವರ್ಷ ಅವಧಿ) | 25 ( 20 ತೇರ್ಗಡೆಯಾಗಿದ್ದಾರೆ) |
| | ಅರೆ ವೈದ್ಯಕೀಯ ಕಾರ್ಯಕರ್ತರ ತರಬೇತಿ (ಕುಷ್ಠ) (4 ತಿಂಗಳ ತರಬೇತಿ) | 26 (24 ತೇರ್ಗಡೆಯಾಗಿದ್ದಾರೆ) |
| **ಇತರೆ ತರಬೇತಿಗಳು** | | |
| | ಹಿರಿಯ ಮತ್ತು ಕಿರಿಯ ಆರೋಗ್ಯ ಸಹಾಯಕಿಯರಿಗೆ (ಮ) ಸಂಚಾರಿ ತರಬೇತಿ ತಂಡ, ಬೆಂಗಳೂರು ರವರಿಂದ | 119 |

ಕಿರಿಯ ಆರೋಗ್ಯ ಸಹಾಯಕರು (ಪು ಮತ್ತು ಮ) 85

ಜಿಲ್ಲಾ ಮಟ್ಟದ ವೈದ್ಯಾಧಿಕಾರಿಗಳಿಗೆ (ವಿಶ್ವ ಆರೋಗ್ಯ ಸಂಸ್ಥೆಯ ನೆರವಿನಿಂದ) 27

**ಇತರೆ ಸಂಸ್ಥೆಗಳಲ್ಲಿ ತರಬೇತಿ**

| | ರಾಜ್ಯದಲ್ಲಿ | ರಾಜ್ಯದ ಹೊರಗೆ ಮತ್ತು ದೇಶದಲ್ಲಿ | ದೇಶದಹೊರಗೆ (ವಿದೇಶದಲ್ಲಿ) |
|---|---|---|---|
| 1. ವೈದ್ಯಾಧಿಕಾರಿಗಳು | 190 | 7 | 2 |
| 2. ವೈದ್ಯೇತರ ಸಿಬ್ಬಂದಿ | 275 | 6 | 1 |

## ಶಾಲಾ ಆರೋಗ್ಯ ಕಾರ್ಯಕ್ರಮ

1993-94 ನೇ ಸಾಲಿನ ಶಾಲಾ ಆರೋಗ್ಯ ಕಾರ್ಯಕ್ರಮದ ಸಾಧನೆಗಳು ಈ ಕೆಳಕಂಡಂತಿವೆ.

1. ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ : ಹಿರಿಯ ಮತ್ತು ಕಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳು 1,4 ಮತ್ತು 7ನೇ ತರಗತಿ - 22,55,427
2. ವೈದ್ಯಕೀಯ ಪರೀಕ್ಷೆ ನಡೆಸಲಾದ ವಿದ್ಯಾರ್ಥಿಗಳ ಸಂಖ್ಯೆ 23,15,111
3. ನ್ಯೂನತೆಗಳು ಕಂಡು ಬಂದ ವಿದ್ಯಾರ್ಥಿಗಳ ಸಂಖ್ಯೆ - 2,74,787
4. ನ್ಯೂನತೆಯುಳ್ಳ ವಿದ್ಯಾರ್ಥಿಗಳಿಗೆ ಚಿಕಿತ್ಸೆಗಾಗಿ ಕಾರ್ಯಾನುಸರಣೆ ಮಾಡಿದ ಸಂಖ್ಯೆ - 1,37,060

## ಲಸಿಕಾ ಕಾರ್ಯಕ್ರಮ ಸೇವೆಯನ್ನು ಒದಗಿಸಿದ್ದು

1. ಡಿ ಮತ್ತು ಟಿ ಲಸಿಕೆಗಳನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ 10,87,169
2. ಟಿಟಿ ಲಸಿಕೆಯನ್ನು ಪಡೆದ ವಿದ್ಯಾರ್ಥಿಗಳ ಸಂಖ್ಯೆ 8.66,815
3. ಶಾಲೆಗಳಲ್ಲಿ ಆರೋಗ್ಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಚರ್ಚಿಸಿದ ಸಂಖ್ಯೆ 1,37,522
4. ಶಾಲಾ ಆರೋಗ್ಯ ಕಾರ್ಯಕ್ರಮದಡಿಯಲ್ಲಿ ಶಿಕ್ಷಕರಿಗೆ ತರಬೇತಿ ನೀಡಿದ ಸಂಖ್ಯೆ 13,082

ರಾಜ್ಯದಲ್ಲಿರುವ 4 ವಿಭಾಗೀಯ ಸಹ ನಿರ್ದೇಶಕರ ಕಾರ್ಯಾಲಯಕ್ಕೆ ಹೊಂದಿಕೊಂಡಿರುವ ಸಂಚಾರಿ ನೇತ್ರ ಮತ್ತು ದಂತ ಚಿಕಿತ್ಸಾ ವಿಶೇಷ ಘಟಕಗಳು ಈ ಕಾರ್ಯಕ್ರಮದಡಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. 1993-94 ನೇ ಸಾಲಿನ ಸಾಧನೆಗಳು ಈ ಕೆಳಕಂಡಿಂತಿವೆ.

1. ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಭೇಟಿ ನೀಡಿದ ಸಂಖ್ಯೆ 124
2. ಶಾಲೆಗಳಿಗೆ ಭೇಟಿ ನೀಡಿದ ಸಂಖ್ಯೆ 591

**ನೇತ್ರ**

1. ಪರೀಕ್ಷಿಸಿದ ವಿದ್ಯಾರ್ಥಿಗಳ ಸಂಖ್ಯೆ 54,690
2. ನ್ಯೂನತೆ ಕಂಡುಬಂದ ವಿದ್ಯಾರ್ಥಿಗಳ ಸಂಖ್ಯೆ 2,397
3. ಚಿಕಿತ್ಸೆ ನೀಡಿದ ವಿದ್ಯಾರ್ಥಿಗಳ ಸಂಖ್ಯೆ 2,243
4. ಕನ್ನಡಕಗಳನ್ನು ಬಳಸಲು ಸಲಹೆ ಮಾಡಿದ ವಿದ್ಯಾರ್ಥಿಗಳ ಸಂಖ್ಯೆ 559
5. ಇತರ ಸಂಸ್ಥೆಗಳಿಗೆ ನಿರ್ದೇಶಿಸಿದ ವಿದ್ಯಾರ್ಥಿಗಳ ಸಂಖ್ಯೆ 4,704

**ದಂತ**

1. ಪರೀಕ್ಷಿಸಿದ ವಿದ್ಯಾರ್ಥಿಗಳ ಸಂಖ್ಯೆ 41,296
2. ನ್ಯೂನತೆ ಕಂಡು ಬಂದ ವಿದ್ಯಾರ್ಥಿಗಳ ಸಂಖ್ಯೆ 10,201
3. ಚಿಕಿತ್ಸೆ ಪಡೆದ ವಿದ್ಯಾರ್ಥಿಗಳ ಸಂಖ್ಯೆ 9.797

## ಕ್ಷೇತ್ರಾಧ್ಯಯನ ಮತ್ತು ಪ್ರಾತ್ಯಕ್ಷಿಕ ಘಟಕ

ಈ ಘಟಕವು ಬೆಂಗಳೂರು ನಗರ ಜಿಲ್ಲೆಗೆ ಸೇರಿದ ಹೆಸರಘಟ್ಟ ಪ್ರಾಥಮಿಕ ಆರೋಗ್ಯ ಕೇಂದ್ರದ ವ್ಯಾಪ್ತಿಯಲ್ಲಿ ಬರುವ ಅಗ್ರಹಾರ ಆರೋಗ್ಯ ಘಟಕಕ್ಕೆ ಸೇರಿದ 18 ಗ್ರಾಮಗಳಲ್ಲಿ ಶಾಲಾ ಶಿಕ್ಷಕರ ತರಬೇತಿ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳ ವೈದ್ಯೇತರ ಸಿಬ್ಬಂದಿ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನ ನೀಡುವುದೇ ಅಲ್ಲದೇ ಆರೋಗ್ಯ ಶಿಕ್ಷಣ ಮತ್ತು ಮಾಧ್ಯಮಕ್ಕೆ ಸಂಬಂಧಿಸಿದಂತೆ ತಯಾರಿಸಿದ ಸಾಮಗ್ರಿಗಳ ಕ್ಷೇತ್ರ ಪ್ರಯೋಗ ಪ್ರಾತ್ಯಕ್ಷಿಕೆಗಳನ್ನು ಕೈಗೊಂಡಿದ್ದಿತು.

## ವಿದ್ಯಾರ್ಥಿ ಆರೋಗ್ಯ ಶಿಕ್ಷಣ ಘಟಕ

ಈ ವಿಭಾಗವು ಶಾಲಾ ಶಿಕ್ಷಕರುಗಳಿಗೆ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆ 5-7 ನೇ ತರಗತಿಯ ವರೆಗಿನ ವಿದ್ಯಾರ್ಥಿಗಳ ಪಠ್ಯಕ್ರಮಗಳಲ್ಲಿ ಆರೋಗ್ಯ ವಿಷಯಗಳನ್ನು ಅಳವಡಿಸುವ ಬಗ್ಗೆ ಕೈಪಿಡಿಯನ್ನು ತಯಾರಿಸುತ್ತದೆ. ಈ ಘಟಕವು ಜಿಲ್ಲೆಗಳಿಗೆ ಭೇಟಿ ಕೊಡುವ ಮೂಲಕ ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿ ಮತ್ತು ಶಾಲೆಗಳಲ್ಲಿ ಆರೋಗ್ಯ ಶಿಕ್ಷಣ ಕಾರ್ಯ ಚಟುವಟಿಕೆಗಳ ಬಗ್ಗೆ ಮೇಲ್ವಿಚಾರಣೆ ನಡೆಸಿ ಮಾರ್ಗದರ್ಶನ ನೀಡಿರುತ್ತದೆ.

# ಪೌಷ್ಟಿಕ ಆಹಾರ ವಿಭಾಗದ ಕಾರ್ಯಕ್ರಮಗಳು

ಈ ಕಾರ್ಯಕ್ರಮದ ಮುಖ್ಯ ಗುರಿ ಅಂದರೆ ಐದು ವರ್ಷದೊಳಗಿನ ಮಕ್ಕಳಲ್ಲಿ ತೀವ್ರ ರೀತಿಯ ಅಪೌಷ್ಟಿಕತೆಯನ್ನು ತಡೆಗಟ್ಟುವುದಲ್ಲದೆ

1. 'ಎ' ಅನ್ನಾಂಗ ಕೊರತೆ ಮತ್ತು ಇದರಿಂದುಂಟಾಗುವ ಅಂಧತ್ವ ನಿವಾರಣೆ
2. ಕಡಿಮೆ ತೂಕದಿಂದ ಜನಿಸುವ ಮಕ್ಕಳ ಸಂಖ್ಯೆ ಕಡಿಮೆ ಮಾಡುವುದು,
3. ಅಯೋಡಿನ್‌ಯುಕ್ತ ಉಪ್ಪಿನ ಸೇವನೆ ಮತ್ತು
4. ಕಬ್ಬಿಣಾಂಶ ಕೊರತೆಯಿಂದುಂಟಾಗುವ ರಕ್ತಹೀನತೆಯನ್ನು ತಗ್ಗಿಸುವುದು.

ಪೌಷ್ಠಿಕ ಆಹಾರ ಕಾರ್ಯಕ್ರಮವು ಈ ಕೆಳಕಂಡ ಕಾರ್ಯಚಟುವಟಿಕೆಗಳ ನ್ನೊಳಗೊಂಡಿರುತ್ತದೆ.

1. 'ಎ' ಅನ್ನಾಂಗ ಕೊರತೆಯ ನಿವಾರಣೆ ಕಾರ್ಯಕ್ರಮ ಮತ್ತು ದಢಾರ ಲಸಿಕೆಯ ಜೊತೆ 'ಎ' ಅನ್ನಾಂಗ ವಿತರಣಾ ಕಾರ್ಯಕ್ರಮ

2) ಸಮಗ್ರ ಬಾಲವಿಕಾಸ ಸೇವೆಗಳ ಯೋಜನೆ,

3) ರಾಷ್ಟ್ರೀಯ ಅಯೋಡಿನ್ ಕೊರತೆಯಿಂದುಂಟಾಗುವ ನ್ಯೂನತೆಗಳ ನಿಯಂತ್ರಣ ಕಾರ್ಯಕ್ರಮ,

4) ಪೌಷ್ಠಿಕ ಆಹಾರ ಶ್ಷಿಣ ಚಟುವಟಿಕೆಯನ್ನೊಳಗೊಂಡಂತೆ ತರಬೇತಿ ಕಾರ್ಯಕ್ರಮ.

5) ರಾಷ್ಟ್ರೀಯ ಪೌಷ್ಠಿಕ ಆಹಾರ ಸಮೀಕ್ಷಾ ತಂಡದಿಂದ ನಡೆಸುವ ಆಹಾರ ಮತ್ತು ಪೌಷ್ಟಿಕತೆಯ ಮಟ್ಟದ ಬಗೆಗಿನ ಮೇಲ್ವಿಚಾರಣೆ.

**1) 'ಎ' ಅನ್ನಾಂಗ ಕೊರತೆ ನಿವಾರಣೆ ಕಾರ್ಯಕ್ರಮ :**

'ಎ' ಅನ್ನಾಂಗ ತೀವ್ರ ಕೊರತೆಯಿಂದ ಶಾಶ್ವತ ಅಂಧತ್ವ ಉಂಟಾಗುತ್ತದೆ. 'ಎ' ಅನ್ನಾಂಗ ತೀವ್ರ ಕೊರತೆಯಿಂದುಂಟಾಗುವ ಅಂಧತ್ವವನ್ನು ನಿವಾರಿಸುವ ಸಲುವಾಗಿ ಈ ಕಾರ್ಯಕ್ರಮವು ರಾಜ್ಯದಲ್ಲಿ ಜಾರಿಯಲ್ಲಿದೆ. ಈ ಕಾರ್ಯಕ್ರಮದನ್ವಯ 27 ಲಕ್ಷ ಶಾಲಾ ಪೂರ್ವ ವಯಸ್ಸಿನ ಮಕ್ಕಳಿಗೆ ತಲಾ ಎರಡು ಲಕ್ಷ ಐ.ಯು ಗಳಷ್ಟು 'ಎ' ಅನ್ನಾಂಗವನ್ನು ಆರು ತಿಂಗಳಿಗೊಮ್ಮೆ ವಿತರಿಸಲಾಗುತ್ತಿದೆ. ಈ ಕಾರ್ಯಕ್ರಮದ ಬಗ್ಗೆ ತಿಳುವಳಿಕೆ ನೀಡಲು ಮತ್ತು ಕಾರ್ಯಕ್ರಮದ ಪ್ರಗತಿಯನ್ನು ಉತ್ತಮಗೊಳಿಸಲು ಮಹಿಳಾ ಆರೋಗ್ಯ ಸಹಾಯಕಿಯರುಗಳಿಗೆ ಕಾಲಕಾಲಕ್ಕೆ ಪುನರ್ ಮನನ ತರಬೇತಿ ಕಾರ್ಯಕ್ರಮವನ್ನು ವ್ಯವಸ್ಥೆಗೊಳಿಸಲಾಗುತ್ತಿದೆ.

ಈ ವರ್ಷದಿಂದ ಲಸಿಕೆಯ ಜೊತೆಗೆ 'ಎ' ಅನ್ನಾಂಗ ವಿತರಣೆ ಆದರಲ್ಲೂ ಮುಖ್ಯವಾಗಿ ದಢಾರ ಲಸಿಕೆಯೊಂದಿಗೆ 'ಎ' ಅನ್ನಾಂಗ ಹಂಚುವ ವ್ಯವಸ್ಥೆಯನ್ನು ಅಳವಡಿಸಲಾಗಿದ್ದು, ಒಂದು ವರ್ಷದೊಳಗಿನ ಮಕ್ಕಳಿಗೆ ಒಂದು ಲಕ್ಷ ಇಂಟರ್ ನ್ಯಾಷನಲ್ ಯೂನಿಟ್‌ದಷ್ಟು 'ಎ' ಅನ್ನಾಂಗ ವಿತರಣೆ ಮಾಡಲಾಗುತ್ತಿದೆ. ಈ ವರ್ಷದಲ್ಲಿ ಹತ್ತು ಲಕ್ಷ 'ಎ' ಅನ್ನಾಂಗದ 10 ಲಕ್ಷ ಕ್ಯಾಪ್ಸುಲ್‌ಗಳನ್ನು ದಢಾರ ಲಸಿಕೆ ಕಾರ್ಯಕ್ರಮದೊಂದಿಗೆ ಒದಗಿಸಲಾಗಿದೆ. ಹಂತ ಹಂತವಾಗಿ ಈ ಕಾರ್ಯವನ್ನು ಶಿಶುಸಂರಕ್ಷಣೆ ಮತ್ತು ಸುರಕ್ಷಿತ ತಾಯ್ತನ ಕಾರ್ಯಕ್ರಮದೊಂದಿಗೆ ವಿಲೀನಗೊಳಿಸಲಾಗುತ್ತದೆ.

**2. ಸಮಗ್ರ ಬಾಲವಿಕಾಸ ಯೋಜನೆ ಕಾರ್ಯಕ್ರಮ :**

ಈ ಕಾರ್ಯಕ್ರಮ ದಡಿಯಲ್ಲಿ

1. ಪೂರಕ ಪೌಷ್ಠಿಕ ಆಹಾರ.
2. ರಕ್ಷಣಾ ಚಿಕಿತ್ಸೆ
3. ಆರೋಗ್ಯ ತಪಾಸಣೆ

4. ಪರಾಮರ್ಶಕ ಸೇವೆಗಳು
5. ಆರೋಗ್ಯ ಮತ್ತು ಪೌಷ್ಟಿಕ ಆಹಾರ ಶಿಕ್ಷಣ ಮತ್ತು
6. ಅನೌಪಚಾರಿಕ ಶಾಲಾ ಪೂರ್ವ ಶಿಕ್ಷಣ ಸೇವೆಗಳನ್ನು ಅಳವಡಿಸಲಾಗಿದೆ.

ವಲಯ ಮಟ್ಟದ ತರಬೇತಿ ಮತ್ತು ನಿರಂತರ ಶಿಕ್ಷಣ, ವೈದ್ಯಾಧಿಕಾರಿಗಳ ತರಬೇತಿ ಶೇಕಡಾ 100 ರಷ್ಟು ಲಸಿಕೆ ಚಿಕಿತ್ಸೆ ಒದಗಿಸುವುದು, ಪರಾಮರ್ಶಕ ಸೇವೆಗಳು ಮತ್ತು ಅಂಗನವಾಡಿ ಕೇಂದ್ರಗಳಲ್ಲಿ ಆರೋಗ್ಯ ತಪಾಸಣೆ ಮುಂತಾದ ಸೇವೆಗಳನ್ನು ಒದಗಿಸುವ ಜವಾಬ್ದಾರಿಯು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯದಾಗಿದೆ. ರಾಜ್ಯದಲ್ಲಿ 92-93ನೇ ಸಾಲಿನವರೆಗೆ ಮಂಜೂರಾಗಿದ್ದ 148 ಪ್ರಾಜೆಕ್ಟ್‌ಗಳಲ್ಲಿ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ.

ಪ್ರತಿ ತಿಂಗಳೂ ನಿರಂತರ ಶಿಕ್ಷಣದಡಿಯಲ್ಲಿ ಶೇಕಡ 75 ರಷ್ಟು ವಲಯಗಳಲ್ಲಿ ತರಬೇತಿ ನೀಡಲಾಗಿದೆ ಮತ್ತು ಶೇಕಡ 50 ರಷ್ಟು ಅಂಗನವಾಡಿ ಕೇಂದ್ರಗಳಿಗೆ ಆರೋಗ್ಯ ತಪಾಸಣೆ ನಡೆಸುವ ಸಲುವಾಗಿ ವೈದ್ಯಾಧಿಕಾರಿಗಳು ಅಂಗನವಾಡಿ ಕೇಂದ್ರಗಳಿಗೆ ಭೇಟಿ ನೀಡಿರುತ್ತಾರೆ.

### 3. ಅಯೋಡಿನ್ ಕೊರತೆಯಿಂದ ಉಂಟಾಗುವ ನ್ಯೂನತೆಗಳು

ಕರ್ನಾಟಕ ರಾಜ್ಯದಲ್ಲಿ ರಾಷ್ಟ್ರೀಯ ಅಯೋಡಿನ್ ಕೊರತೆಯಿಂದ ಉಂಟಾಗುವ ನ್ಯೂನ್ಯತಾ ನಿಯಂತ್ರಣ ಕಾರ್ಯಕ್ರಮವು 1988-89 ರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿ ಶೇಕಡ 100 ರಷ್ಟು ಕೇಂದ್ರದ ನೆರವಿನ ಆಧಾರದ ಮೇಲೆ ಗಳಗಂಡ ಖಾಯಿಲೆ ವಿಭಾಗವನ್ನು ಸ್ಥಾಪಿಸುವುದರ ಮೂಲಕ ಪ್ರಾರಂಭವಾಯಿತು.

ಸಮೀಕ್ಷಾ ವರದಿಯು ಕೆಳಕಂಡ ಜಿಲ್ಲೆಗಳಲ್ಲಿ ಶೇಕಡ 10 ಕ್ಕಿಂತ ಹೆಚ್ಚು ಗಳಗಂಡ ರೋಗವಿರುವುದನ್ನು ಸೂಚಿಸಿರುತ್ತದೆ.

| ಜಿಲ್ಲೆಯ ಹೆಸರು | ಸಮೀಕ್ಷೆ ನಡೆಸಿದ ಒಟ್ಟು ಗ್ರಾಮದ ಸಂಖ್ಯೆ | ಸಮೀಕ್ಷೆ ನಡೆಸಿದ ಒಟ್ಟು ಜನಸಂಖ್ಯೆ | ಒಟ್ಟುಗಳಗಂಡ ರೋಗಿಗಳು | ಶೇಕಡ ಪ್ರಮಾಣ |
|---|---|---|---|---|
| 1. ಚಿಕ್ಕಮಗಳೂರು | 5 | 3,196 | 1,314 | 41.11 |
| 2. ಕೊಡಗು | 6 | 4,623 | 1,069 | 23.12 |
| 3. ದಕ್ಷಿಣ ಕನ್ನಡ (ಮಂಗಳೂರು) | 17 | 15,544 | 2,219 | 14.27 |
| 4. ಉತ್ತರಕನ್ನಡ (ಕಾರವಾರ) | 25 | 15,091 | 1,611 | 10.67 |



ಈ ಪ್ರದೇಶಗಳಲ್ಲಿ ಅಯೋಡಿನ್ ರಹಿತ ಉಪ್ಪಿನ ಮಾರಾಟವನ್ನು ನಿಷೇದಿಸಿರುವುದನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿ ಸಾಮಾನ್ಯ ಉಪ್ಪಿನ ಬದಲಾಗಿ ಅಯೋಡಿನ್ ಯುಕ್ತ ಉಪ್ಪನ್ನು ನಿರಂತರವಾಗಿ ಸರಬರಾಜು ಮಾಡುವುದರ ಮೂಲಕ ಈ ಕಾರ್ಯಕ್ರಮವನ್ನು ಚಿಕ್ಕಮಗಳೂರು ಜಿಲ್ಲೆಯಲ್ಲಿ ನಂತರ ಉಳಿದ ಮೂರು ಜಿಲ್ಲೆಗಳಲ್ಲಿ, ಅಂದರೆ, ಕೊಡುಗೆ, ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಜಾರಿಗೊಳಿಸಲಾಗಿದೆ.

### ಅಯೋಡಿನ್ ಯುಕ್ತ ಉಪ್ಪಿನ ಹಂಚಿಕೆ

ನಿರ್ದೇಶಕರು, ಆಹಾರ ಮತ್ತು ನಾಗರೀಕ ಪೂರೈಕೆ ಇಲಾಖೆ ಹಾಗೂ ಕರ್ನಾಟಕ ಆಹಾರ ನಿಗಮ ಇವರನ್ನು ಸಾರ್ವಜನಿಕ ವಿತರಣೆಗೆ ಅಯೋಡಿನ್ ಯುಕ್ತ ಉಪ್ಪನ್ನು ಮೇಲೆ ಹೇಳಿದ ನಾಲ್ಕು ಜಿಲ್ಲೆಗಳಿಗೆ ಸರಬರಾಜು ಮಾಡುವಂತೆ ಕೋರಲಾಗಿದ್ದು, ಅಯೋಡಿನ್ ಯುಕ್ತ ಉಪ್ಪಿನ ಸರಬರಾಜಿನ ಬಗ್ಗೆ ಕಾರ್ಯಕ್ರಮಾಧಿಕಾರಿಗಳು ಹಾಗೂ ರಾಜ್ಯ ಗಳಗಂಡ ಖಾಯಿಲೆ ವಿಭಾಗದವರು ಸತತವಾಗಿ ಉಸ್ತುವಾರಿ ನಡೆಸುತ್ತಿರುತ್ತಾರೆ.

### ಗುಣಮಟ್ಟ ನಿಯಂತ್ರಣ

ಅಯೋಡಿನ್ ಯುಕ್ತ ಉಪ್ಪಿನ ಗುಣಮಟ್ಟದ ಉಸ್ತುವಾರಿ ಸಲುವಾಗಿ ಉಪ್ಪಿನ ಮಾದರಿಗಳನ್ನು ವಿವಿಧ ಮಾರಾಟ ಮೂಲಗಳಿಂದ ಸಂಗ್ರಹಿಸಿ ಪರಿಶೀಲನೆಗಾಗಿ ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರಿಗೆ ಕಳುಹಿಸಿ ಕೊಡುವಂತೆ ಜಿಲ್ಲಾಧಿಕಾರಿಗಳನ್ನು ಹಾಗೂ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳನ್ನು ಕೋರಲಾಗಿದೆ.

ಇದರ ಅಂಗವಾಗಿ ಕ್ಷೇತ್ರದಲ್ಲಿ ಅಯೋಡಿನ್ ಯುಕ್ತ ಉಪ್ಪನ್ನು ಬಳಕೆದಾರರ ಮಟ್ಟದಲ್ಲಿ ಪರೀಕ್ಷಿಸುವ ಸಲುವಾಗಿ ಕೈಪೆಟ್ಟಿಗೆಗಳನ್ನು ಖರೀದಿಸಿ ಆರೋಗ್ಯ ಕಾರ್ಯಕರ್ತರಿಗೆ ಕೊಡಲಾಗಿದೆ.

### ಶಿಕ್ಷಣ ಚಟುವಟಿಕೆಗಳು

ಸಾರ್ವಜನಿಕರಲ್ಲಿ ಅಯೋಡಿನ್ ಯುಕ್ತ ಉಪ್ಪನ್ನು ಉಪಯೋಗಿಸುವುದರ ಉಪಯುಕ್ತತೆ ಬಗ್ಗೆ ಅರಿವು ಮೂಡಿಸಲು ಪೋಸ್ಟರ್ ಗಳು, ಕರಪತ್ರಗಳು, ಫ್ಲಿಪ್ ಬುಕ್, ವಾಲ್‌ಪೋಸ್ಟರುಗಳು, ಸಿನಿಮಾ ಸ್ಲೈಡ್ ಮುಂತಾದ ಶಿಕ್ಷಣ ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ.

### ರಾಜ್ಯ ಮಟ್ಟದ ಸಮನ್ವಯ ಸಮಿತಿ

ರಾಜ್ಯ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಲಾಗಿದ್ದು, ಈ ಸಮಿತಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಕಾರ್ಯದರ್ಶಿಯವರು ಸಭಾಧ್ಯಕ್ಷರಾಗಿದ್ದು ಆಗಿಂದಾಗ್ಗೆ ಈ ಕಾರ್ಯಕ್ರಮದ ಅನುಷ್ಠಾನದ ಬಗೆಗಿನ ಪರಿಶೀಲನೆ ನಡೆಸುತ್ತದೆ.

### 4. ತರಬೇತಿ ಒಳಗೊಂಡಂತೆ ಪೌಷ್ಟಿಕ ಆಹಾರ ಶಿಕ್ಷಣ ಚಟುವಟಿಕೆಗಳು

ಮಗುವಿಗೆ ಆರು ತಿಂಗಳ ನಂತರ ತಾಯಿಯ ಹಾಲಿನ ಜೊತೆ ಸಕಾಲದಲ್ಲಿ ಸೂಕ್ತ ಪೂರಕ ಆಹಾರವನ್ನು ಕೊಡುವ ವಿಷಯದಲ್ಲಿ ಹಾಗೂ 6 ತಿಂಗಳವರೆಗೆ ತಾಯಿ ಹಾಲು ಮಾತ್ರ ಕುಡಿಸುವ ಬಗ್ಗೆ ಮೈಸೂರಿನಲ್ಲಿ ಒಂದು ಕಾರ್ಯಾಗಾರವನ್ನು ಪ್ರಸ್ತುತ ಸಾಲಿನಲ್ಲಿ ನಡೆಸಲಾಯಿತು. ಈ ಕಾರ್ಯಾಗಾರದಲ್ಲಿ ಮಕ್ಕಳ ತಜ್ಞರು, ಪ್ರಸೂತಿ ತಜ್ಞರು,

ಪೌಷ್ಟಿಕಾಹಾರ ತಜ್ಞರು, ಆರೋಗ್ಯ ಶಿಕ್ಷಕರು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಜಿಲ್ಲಾ ಆಸ್ಪತ್ರೆ ಮುಖ್ಯಸ್ಥರು ಭಾಗವಹಿಸಿದ್ದರು. ಜಿಲ್ಲಾ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮಟ್ಟದಲ್ಲಿ ಈ ರೀತಿಯ ಚಟುವಟಿಕೆಗಳನ್ನು ನಡೆಸುವಂತೆ ಮಾಡುವುದೇ ಈ ಕಾರ್ಯಾಗಾರದ ಮುಖ್ಯ ಉದ್ದೇಶವಾಗಿತ್ತು.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರ, ರಾಷ್ಟ್ರೀಯ ಸಾರ್ವಜನಿಕ ಹಾಗೂ ಮಕ್ಕಳ ಅಭಿವೃದ್ಧಿ ಸಂಸ್ಥೆ ಹಾಗೂ ಸಮಗ್ರ ಬಾಲವಿಕಾಸ ಯೋಜನಾ ಕಾರ್ಯಕ್ರಮದ ಸಲಹೆಗಾರರು ನಡೆಸುವ ತರಬೇತಿ ಕಾರ್ಯಕ್ರಮಗಳಲ್ಲಿ ಪೌಷ್ಟಿಕ ಆಹಾರ ವಿಭಾಗವು ಕಾಲಕಾಲಕ್ಕೆ ಪಾಲ್ಗೊಳ್ಳುತ್ತಿದೆ.

ಪೌಷ್ಟಿಕ ಆಹಾರ ಕುರಿತಂತೆ ನಾಲ್ಕು ಭಿತ್ತಿ ಪತ್ರಗಳನ್ನು ಮುದ್ರಿಸಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೂ ವಿತರಣೆ ಮಾಡಲಾಗಿದೆ.

ಹಸಿರು ಸೊಪ್ಪಿನ ಉಪಯುಕ್ತತೆ ಬಗ್ಗೆ ಕನ್ನಡದಲ್ಲಿ ಒಂದು ಭಿತ್ತಿ ಪತ್ರ, ಒಂದು ಮಡಿಕೆ ಪತ್ರ ಮತ್ತು ಒಂದು ಕರಪತ್ರ ಇವುಗಳು ಮುದ್ರಣದ ಹಂತದಲ್ಲಿದೆ.

**5. ರಾಷ್ಟ್ರೀಯ ಪೌಷ್ಟಿಕಾಹಾರ ಸಮೀಕ್ಷಾ ತಂಡದಿಂದ ಆಹಾರ ಸಮೀಕ್ಷೆ**

ರಾಷ್ಟ್ರೀಯ ಪೌಷ್ಟಿಕ ಆಹಾರ ಸಮೀಕ್ಷಾ ತಂಡವು ನಿರ್ದೇಶನಾಲಯದ ಪೌಷ್ಟಿಕಾಹಾರ ವಿಭಾಗಕ್ಕೆ ಹೊಂದಿಕೊಂಡಿದ್ದು, ಈ ತಂಡವು 'ಎ' ಅನ್ನಾಂಗ ವಿತರಣೆ ಬಗ್ಗೆ ಹಾಸನ ಮತ್ತು ಮೈಸೂರು ಜಿಲ್ಲೆಗಳಲ್ಲಿ ಸಮೀಕ್ಷೆ ನಡೆಸಿದೆ. ಈ ಸಮೀಕ್ಷಾ ತಂಡವು ಬೆಂಗಳೂರು ನಗರದ ಕೊಳಚೆ ಪ್ರದೇಶಗಳಲ್ಲಿ ಪೌಷ್ಟಿಕ ಆಹಾರ ಸಮೀಕ್ಷೆಗಳನ್ನು ನಡೆಸುತ್ತಿದೆ.

## ಮಾನಸಿಕ ಆರೋಗ್ಯ ಕಾರ್ಯಕ್ರಮ

ರಾಜ್ಯದಲ್ಲಿ ಮಾನಸಿಕ ಆರೋಗ್ಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಪ್ರಾರಂಭಿಕವಾಗಿ ಬಳ್ಳಾರಿ ಜಿಲ್ಲೆಯನ್ನು ಆಯ್ಕೆಮಾಡಿ, ಈ ಕಾರ್ಯಕ್ರಮವನ್ನು 1885-86ರಲ್ಲಲಿ ಅನುಷ್ಠಾನಗೊಳಿಸಲಾಯಿತು. ಈಗ ಈ ಕಾರ್ಯಕ್ರಮವನ್ನು ಇತರ 6 ಜಿಲ್ಲೆಗಳಿಗೆ ಅಂದರೆ, ವಿಜಾಪುರ, ಚಿತ್ರದುರ್ಗ, ಕೋಲಾರ, ದಕ್ಷಿಣ ಕನ್ನಡ, ಧಾರವಾಡ ಹಾಗೂ ಚಿಕ್ಕಮಗಳೂರು ಜಿಲ್ಲೆಗಳಿಗೆ ವಿಸ್ತರಿಸಲಾಗಿದೆ.

## ಶುಶ್ರೂಷಾ ಕಾರ್ಯಕ್ರಮ

ರಾಜ್ಯದ ಎಲ್ಲಾ ನಾಗರೀಕರಿಗೂ ಆರು ತಿಂಗಳಿಗೊಮ್ಮೆ ಉಚಿತ ವೈದ್ಯಕೀಯ ತಪಾಸಣೆ ಅವಕಾಶವನ್ನು ಒದಗಿಸಿಕೊಡುವುದು ಈ ಕಾರ್ಯಕ್ರಮದ ಉದ್ದೇಶವಾಗಿರುತ್ತದೆ.

ಈ ಉಚಿತ ವೈದ್ಯಕೀಯ ತಪಾಸಣೆಯಲ್ಲಿ ರಾಜ್ಯದಲ್ಲಿನ ಪ್ರತಿಯೊಬ್ಬ ಪ್ರಜೆಗೂ ಅದರಲ್ಲೂ ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಹೆಚ್ಚಾಗಿ ವಾಸಿಸುವ ಪ್ರದೇಶ, ಕೊಳಚೆ ಪ್ರದೇಶ ಮತ್ತು ಆರ್ಥಿಕವಾಗಿ ಹಿಂದುಳಿದವರು ವಾಸಿಸುವ ಪ್ರದೇಶಗಳಲ್ಲಿ ಸಂಪೂರ್ಣ ವೈದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳುವ ಅವಕಾಶವನ್ನು ಕಲ್ಪಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.

ಈ ವೈದ್ಯಕೀಯ ತಪಾಸಣೆಯಲ್ಲಿ ಕೆಳಗೆ ತಿಳಿಸಿರುವ ಪರೀಕ್ಷೆಗಳನ್ನು ಅಳವಡಿಸಲಾಗಿದೆ.

1. ಭೌತಿಕ ಪರೀಕ್ಷೆ — ನಾಡಿಮಿಡಿತ, ರಕ್ತದ ಒತ್ತಡ,ಕಣ್ಣು, ಕಿವಿ, ಮೂಗು, ಹಲ್ಲು, ನಾಲಿಗೆ, ಚರ್ಮದ ರೋಗಗಳು ನ್ಯೂನತೆಗಳು ಇತ್ಯಾದಿ

2. ದೇಹಕ್ಕೆ ಸಂಬಂಧಿಸಿದ ಪರೀಕ್ಷೆ — ಅದರಲ್ಲಿ ಹೃದಯ ಪರೀಕ್ಷೆ, ಶ್ವಾಸಕೋಶ ಪರೀಕ್ಷೆ, ನಾಡಿ ಪರೀಕ್ಷೆ, ಉದರ ಪರೀಕ್ಷೆ ಇತ್ಯಾದಿ ಹಾಗೂ

3. ಸರಳ ಪ್ರಯೋಗಶಾಲಾ ಪರೀಕ್ಷೆ — ಮಲ, ಮೂತ್ರ, ರಕ್ತ ಇತ್ಯಾದಿ

ಖಾಯಿಲೆ ಹಾಗೂ ನ್ಯೂನತೆಗಳನ್ನು ಪ್ರಾರಂಭದ ಹಂತದಲ್ಲಿಯೇ ತಿಳಿಯಲು ಮೇಲ್ಕಂಡ ಪರೀಕ್ಷೆಗಳನ್ನು ನಡೆಸಲಾಗುವುದು.

ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸಲಾಗಿದ್ದು, ಇದರಲ್ಲಿ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಯವರು ಅಧ್ಯಕ್ಷರಾಗಿದ್ದು, ಇತರ 9 ಜನ ಸದಸ್ಯರುಗಳು ಇರುತ್ತಾರೆ.

ಈ ಯೋಜನೆಯ ಪ್ರಕಾರ ಆರೋಗ್ಯ ತಪಾಸಣೆಯ ಕಾಲದಲ್ಲಿ ಪರೀಕ್ಷಿಸಿದವರಲ್ಲಿ ಯಾರಿಗಾದರೂ ಹೆಚ್ಚಿನ ಪರೀಕ್ಷೆ ಹಾಗೂ ಚಿಕಿತ್ಸೆ ಏನಾದರೂ ಬೇಕಾಗಿ ಕಂಡುಬಂದಲ್ಲಿ, ಅಂತಹವರುಗಳನ್ನು ಸೌಕರ್ಯವಿರುವ ಸೂಕ್ತ ಆಸ್ಪತ್ರೆಗಳಿಗೆ ಕಳುಹಿಸಿ ಕೊಡಲಾಗುತ್ತದೆ.

ಇಂತಹ ಸ್ಥಳಗಳಿಗೆ ಹೋಗಿ ಬರಲು ತಗಲುವ ಸಾರಿಗೆ ವೆಚ್ಚವನ್ನು ಆರ್ಥಿಕವಾಗಿ ಅಶಕ್ತರಾದ ರೋಗಿ ಹಾಗೂ ರೋಗಿಯ ಒಬ್ಬ ಸಂಗಾತಿಗೆ ವಿತರಣೆ ಮಾಡಲಾಗುತ್ತದೆ.

ಈ ಯೋಜನೆಯನ್ನು ಜಾರಿಗೆ ತರುವುದಕ್ಕಾಗಿ 1993-94ನೇ ಸಾಲಿಗೆ ಒಂದು ಕೋಟಿ ರೂ.ಗಳನ್ನು ನಿಗಧಿಗೊಳಿಸಲಾಗಿದೆ. ಈ ಹಣದಲ್ಲಿ ಮಾರ್ಚ್ 94ರ ಅಂತ್ಯದವರೆಗೆ 9.54 ಲಕ್ಷ.ರೂ.ಗಳನ್ನು ವೆಚ್ಚ ಮಾಡಲಾಗಿದೆ.

1993 ರ ಏಪ್ರಿಲ್ ತಿಂಗಳಿಂದ 1994ರ ಮಾರ್ಚ್ ತಿಂಗಳ ಅಂತ್ಯದವರೆಗೆ ಸಾಧಿಸಲಾದ ಪ್ರಗತಿಯು ಈ ಕೆಳಕಂಡಂತೆ ಇರುತ್ತದೆ.

| ಪ್ರಥಮ : ದ್ವಿತೀಯ ಸುತ್ತಿನಲ್ಲಿ ವೈದ್ಯಕೀಯ ತಪಾಸಣೆ ಹೊಂದಿದವರ ಸಂಖ್ಯೆ | ದೊಡ್ಡ ಆಸ್ಪತ್ರೆಗಳಿಗೆ ಕಳುಹಿಸಿದ ಪ್ರಕರಣಗಳ ಸಂಖ್ಯೆ | ವಿಶೇಷ ವೈದ್ಯಕೀಯ ಸಂಸ್ಥೆಗಳಿಗೆ ಕಳುಹಿಸಿದ ಪ್ರಕರಣಗಳು |
|---|---|---|
| 3,59.378 | 17,668 | 3,384 |

**ಲಸಿಕೆ ಸಂಸ್ಥೆ, ಬೆಳಗಾಂ :**

ಹುಚ್ಚುನಾಯಿ ಕಡಿತದ ವಿರುದ್ಧದ ಲಸಿಕೆಯನ್ನು ತಯಾರಿಸುವುದು (ಬಿ.ಪಿ.ಎಲ್. ಇನ್ಆಕ್ಟಿವೇಟೆಡ್) ಈ ಸಂಸ್ಥೆಯ ಜವಾಬ್ದಾರಿಯಾಗಿರುತ್ತದೆ ಮತ್ತು ಲಸಿಕೆಯನ್ನು ಕರ್ನಾಟಕ

ರಾಜ್ಯದ ಎಲ್ಲಾ ಸರ್ಕಾರಿ ಆಸ್ಪತ್ರೆಗಳಿಗೂ ಮತ್ತು ಸ್ಥಾನಿಕ ಆರೋಗ್ಯ ಮತ್ತು ವೈದ್ಯಕೀಯ ಆಸ್ಪತ್ರೆಗಳಿಗೂ ಹಾಗೂ ರಿಜಿಸ್ಟರ್ಡ್ ವೈದ್ಯಕೀಯ ವೃತ್ತಿಗಾರರಿಗೆ ಕೂಡ ಪೂರೈಸಲಾಗುವುದು. ಇದಲ್ಲದೆ, ಭಾರತ ಸರ್ಕಾರದವರು ಒದಗಿಸುವ ಯು.ಐ.ಪಿ. ಲಸಿಕೆಗಳನ್ನು ಸಂಗ್ರಹಿಸುವುದು ಮತ್ತು ಬೆಳಗಾವಿ, ಗುಲ್ಬರ್ಗ ವಿಭಾಗಗಳ 8 ಜಿಲ್ಲೆಗಳಿಗೆ ಮತ್ತು ಬೆಂಗಳೂರು ವಿಭಾಗದ ಚಿತ್ರದುರ್ಗ ಜಿಲ್ಲೆಗೆ ಪೂರೈಸುವುದು. ಬೇರೆ ಬೇರೆ ವೈದ್ಯಕೀಯ ಸಂಸ್ಥೆಗಳಿಂದ ಬರುವ ವೈದ್ಯಕೀಯ ವಿದ್ಯಾರ್ಥಿಗಳು ಮತ್ತು ಆರೋಗ್ಯ ನಿರೀಕ್ಷಕರ ತರಬೇತಿ ಹೊಂದುತ್ತಿರುವವರು ಮತ್ತು ಜಿಲ್ಲಾ ಆಸ್ಪತ್ರೆಗಳ ಸಹಾಯಕ ದಾದಿಯರು ಮತ್ತು ಸ್ಟಾಫ್ ನರ್ಸ್ ಮೊದಲಾದವರಿಗೆ ಹುಚ್ಚುನಾಯಿ ಕಡಿತದ ವಿರುದ್ಧದ ಲಸಿಕೆಯ ತಯಾರಿಕೆ, ಪರೀಕ್ಷೆ ಹಾಗೂ ಚಿಕಿತ್ಸೆಯ ವಿಧಾನದ ಬಗ್ಗೆ ತರಬೇತಿ ನಿರೂಪಣೆ ನೀಡಲಾಗುವುದು. ಜಿಲ್ಲಾ ಆಸ್ಪತ್ರೆ, ಬೆಳಗಾವಿ ಇಲ್ಲಿಂದ ಕಳುಹಿಸಲ್ಪಡುವ ಐ.ವಿ. ದ್ರಾವಣವನ್ನು ಸೂಕ್ಷ್ಮ ಕ್ರಿಮಿ ರಹಿತವಾಗಿರುವುದನ್ನು ಕಂಡು ಹಿಡಿಯುವ ಬಗ್ಗೆ ಪರೀಕ್ಷಿಸುವುದು.

ಈ ಸಂಸ್ಥೆಯಲ್ಲಿ ಶಿವಮೊಗ್ಗಯ ಸೂಕ್ಷ್ಮಾಣು ಜೀವಿ ಪ್ರಯೋಗಾಲಯದ ಕೆ.ಎಫ್.ಡಿ. ಲಸಿಕೆ ತಯಾರಿಕಾ ಘಟಕವು ತಯಾರಿಸಿದ ಕೆ.ಎಫ್.ಡಿ. ಲಸಿಕೆಯ ಗುಣ ನಿಯಂತ್ರಣ ಪರೀಕ್ಷೆಯನ್ನೂ ಸಹ ಕೈಗೊಳ್ಳಲಾಗುತ್ತದೆ.

1993Ë94ನೇ ಸಾಲಿನ ಗುರಿಯು 25,00,000 ಎಂ.ಎಲ್.ಗಳಾಗಿದ್ದು, 1993ರ ನವೆಂಬರ್ ಅಂತ್ಯದವರೆಗೆ 27,50,640 ಎಂ.ಎಲ್.ಗಳಷ್ಟು ಹುಚ್ಚುನಾಯಿ ಕಡಿತ ವಿರುದ್ಧ ಲಸಿಕೆಯನ್ನು ತಯಾರಿಸಲಾಗಿದೆ. ಇದು ವಾರ್ಷಿಕ ಗುರಿಯ ಶೇಕಡ 110.0 ರಷ್ಟು ಇರುತ್ತದೆ.

**1993-94ನೇ ಸಾಲಿನ ಆಯುವ್ಯಯ ಮತ್ತು ವೆಚ್ಚ : (ರೂ.ಗಳಲ್ಲಿ)**

| ವರ್ಷ | ಆಯುವ್ಯಯ | | ವೆಚ್ಚ | |
|---|---|---|---|---|
| | ಯೋಜನೆ | ಯೋಜನೇತರ | ಯೋಜನೆ | ಯೋಜನೇತರ |
| 1993-94 | 35100-00 | 6731000-00 | 57713-00 | 6051205-00 |

## ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು

ಸಾರ್ವಜನಿಕ ಆರೋಗ್ಯ ಸಂಸ್ಥೆಯು ರಾಜ್ಯ ಮಟ್ಟದ ಪ್ರಯೋಗಶಾಲೆಯಾಗಿದ್ದು, ಈ ಕೆಳಕಂಡ ಮುಖ್ಯ ವಿಭಾಗಗಳನ್ನು ಹೊಂದಿದ್ದು, ಅದರ ಚಟುವಟಿಕೆಗಳು 1993-94ರಲ್ಲಿ ಈ ರೀತಿ ಇದೆ.

1) ಕಾಲರಾ ನಿರೋಧ ಲಸಿಕೆ ತಯಾರಿಕೆ ಮತ್ತು ಆರೋಗ್ಯ ಮತ್ತು ವೈದ್ಯಕೀಯ ಸಂಸ್ಥೆಗಳಿಗೆ ಸರಬರಾಜು.
2) ವಿಬ್ರಿಯೋ ಕಾಲರಾ ತಪಾಸಣೆಯಲ್ಲಿ ಸೂಕ್ಷ್ಮಾಣುಗಳ ಪರೀಕ್ಷೆ.
3) ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆ ಅಡಿಯಲ್ಲಿ, ಆಹಾರ ನಮೂನೆಯ ಪರೀಕ್ಷೆ.

4) ಅಬಕಾರಿ ಇಲಾಖೆಯಿಂದ ಬರುವ ರಕ್ತ, ಮೂತ್ರದಲ್ಲಿ ಮಧ್ಯಸಾರದ ಪರೀಕ್ಷೆ.

5) ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆ ಅಡಿಯಲ್ಲಿ ಆಹಾರ ನಮೂನೆಗಳ ಗುಣಮಟ್ಟದ ಪರೀಕ್ಷೆ.

6) ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆ ಅನುಷ್ಠಾನಕ್ಕೆ ಸಂಬಂಧಿಸಿದ ಚಟುವಟಿಕೆಗಳು.

7) ಕುಡಿಯುವ ನೀರಿನ ರಾಸಾಯನಿಕ ಪರೀಕ್ಷೆ ಹಾಗೂ ಜಲಮಾಲಿನ್ಯ ಮತ್ತು ವಾಯುಮಾಲಿನ್ಯ ನಿಯಂತ್ರಣ ಕಾಯಿದೆಯಲ್ಲಿ ಬರುವ, ಕಾರ್ಖಾನೆಯಿಂದ ಹೊರಚೆಲ್ಲಿದ ಜಲ ಮತ್ತು ಅನಿಲಗಳ ಪರೀಕ್ಷೆ.

8) ಅಬಕಾರಿ ಇಲಾಖೆಯಿಂದ ಸಾರ್ವಜನಿಕ ಹಂಚಿಕೆಗೆ ನಿಗಧಿಪಡಿಸಿದ ಮಾದಕ ಪಾನೀಯಗಳ ಗುಣಮಟ್ಟದ ಪರೀಕ್ಷೆ.

9) ಉದ್ದೀಪನ ಮಾದಕ ಪಾನೀಯ ಮತ್ತು ಉದ್ದೀಪನ ಔಷಧಿಗಳ ಪರೀಕ್ಷೆ.

10) ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮದ ಅಡಿಯಲ್ಲಿ ಬಳಸುವ ಕೀಟನಾಶಕಗಳ ಗುಣಮಟ್ಟದ ಪರೀಕ್ಷೆ.

11) ಆಸ್ಪತ್ರೆಗಳಲ್ಲಿ, ಆರೋಗ್ಯ ಕೇಂದ್ರಗಳಲ್ಲಿ ಹಾಗೂ ವೈದ್ಯಕೀಯ ಸಂಸ್ಥೆಗಳಲ್ಲಿ ಉಪಯೋಗಿಸುವ ರಕ್ತನಾಳದಲ್ಲಿ ಕೊಡುವ ದ್ರವದ ಗುಣಮಟ್ಟದ ಪರೀಕ್ಷೆ.

**ಮೇಲಿನ ಚಟುವಟಿಕೆಗಳಿಗಾಗಿ ಸಾರ್ವಜನಿಕ ಆರೋಗ್ಯ ಸಂಸ್ಥೆಯಲ್ಲಿ ಈ ಕೆಳಕಂಡ ವಿಭಾಗಗಳು ಕೆಲಸ ಮಾಡುತ್ತಿವೆ :**

1) ಸೂಕ್ಷ್ಮಾಣು ವಿಭಾಗ

2) ರಾಸಾಯನಿಕ ಪರೀಕ್ಷಕರ ವಿಭಾಗ

3) ರಾಜ್ಯ ಆಹಾರ ಪ್ರಯೋಗಾಲಯ

4) ರಾಜ್ಯ ಜಲ ವಿಶ್ಲೇಷಣ ಪ್ರಯೋಗಾಲಯ

5) ವಿಭಾಗೀಯ ಸಾರ್ವಜನಿಕ ವಿಶ್ಲೇಷಕರ ಹಾಗೂ ಪ್ರಾದೇಶಿಕ ಸಹಾಯಕ ರಾಸಾಯನಿಕ ಪರೀಕ್ಷಕರ ವಿಭಾಗ

6) ಕೀಟನಾಶಕಗಳ ಪ್ರಯೋಗಾಲಯ

7) ರಕ್ತನಾಳದಲ್ಲಿ ಕೊಡುವ ದ್ರವದ ಗುಣಮಟ್ಟದ ನಿಯಂತ್ರಣವಿಭಾಗ

8) ಹಿರಿಯ ಪ್ರಯೋಗಾಲಯ ತಂತ್ರಜ್ಞರ ತರಬೇತಿ ವಿಭಾಗ.

1993-94ನೇ ಸಾಲಿನಲ್ಲಿ ಸಾರ್ವಜನಿಕ ಆರೋಗ್ಯ ಸಂಸ್ಥೆ, ಬೆಂಗಳೂರು ಸಾಧಿಸಿದ ಚಟುವಟಿಕೆಗಳ ವರದಿ ಹೀಗಿದೆ :

1) **ಸೂಕ್ಷ್ಮಾಣು ವಿಭಾಗ :**

| | | |
|---|---|---|
| ಎ) | ಕಾಲರಾ ನಿರೋಧ ಲಸಿಕೆ ತಯಾರಿಸಿದ್ದು | 12,42,000 ಎಂ.ಎಲ್ |
| ಬಿ) | ಜಲ ವಿಶ್ಲೇಷಣೆ | 2,731 |
| ಸಿ) | ಕಾಲರಾ ತಪಾಸಣೆಗಾಗಿ ಬರುವ ನಮೂನೆಗಳ ವಿಶ್ಲೇಷಣೆ | 3,311 |
| ಡಿ) | ರಕ್ತ ಮತ್ತು ಇತರೆ ನಮೂನೆಗಳ ಪರೀಕ್ಷೆ | 141 |
| ಇ) | ವಿಷಮಶೀತ ಜ್ವರ ನಿರೋಧಕ ಲಸಿಕೆ | 75,000 ಎಂ.ಎಲ್ |

2) **ರಾಸಾಯನಿಕ ಪರೀಕ್ಷಕರ ವಿಭಾಗ :**

| | | |
|---|---|---|
| ಎ) | ಮಧ್ಯಸಾರದಿಂದ ಕೂಡಿದ ಔಷಧಿಗಳ ವಿಶ್ಲೇಷಣೆ | 169 |
| ಬಿ) | ರಕ್ತ ಮತ್ತು ಮೂತ್ರದಲ್ಲಿ ಮಧ್ಯಸಾರ ಪ್ರಮಾಣದ ತಪಾಸಣೆ ಮತ್ತು ಇತರೆ ಮಧ್ಯಸಾರದ ವಸ್ತುಗಳು. | 106 |
| ಸಿ) | ಲೋಕಾಯುಕ್ತರಿಂದ ಲಂಚ ನಿರೋಧ ಕಾಯಿದೆಯಡಿಯಲ್ಲಿನ ನಮೂನೆಗಳ ತಪಾಸಣೆ | 158 |

3) **ರಾಜ್ಯ ಆಹಾರ ವಿಶ್ಲೇಷಣಾ ವಿಭಾಗ :**

| | | |
|---|---|---|
| ಎ) | ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆಯಡಿಯಲ್ಲಿ ವಿಶ್ಲೇಷಿಸಿದ ನಮೂನೆಗಳು | 1,808 |

4) **ವಿಭಾಗೀಯ ಆಹಾರ ಪ್ರಯೋಗಾಲಯ :**

| | | |
|---|---|---|
| ಎ) | ಆಹಾರ ಕಲಬೆರಕೆ ನಿಯಂತ್ರಣ ಕಾಯಿದೆಯಡಿಯಲ್ಲಿ ಬೆಂಗಳೂರು ವಿಭಾಗದಿಂದ ಬರುವ ನಮೂನೆಗಳ ಪರೀಕ್ಷೆ | |
| ಬಿ) | ಇತರೆ ರಾಸಾಯನಿಕ ವಸ್ತುಗಳ ಪರೀಕ್ಷೆ | 308 |
| ಸಿ) | ಮಧ್ಯಸಾರದ ತಯಾರಿಕೆಗಳ ಪರೀಕ್ಷೆ | |

5) **ರಾಜ್ಯ ಜಲ ವಿಶ್ಲೇಷಣಾ ಪ್ರಯೋಗಾಲಯ :**

| | | |
|---|---|---|
| ಎ) | ಕುಡಿಯುವ ನೀರಿನ ರಾಸಾಯನಿಕ ಪರೀಕ್ಷೆ | |
| ಬಿ) | ಕಾರ್ಖಾನೆಗಳಿಂದ ಹೊರಚೆಲ್ಲುವ ಜಲ ಮತ್ತು ಅನಿಲಗಳ ನಮೂನೆಗಳ ಪರೀಕ್ಷೆ | 1,591 |
| ಸಿ) | ಕುಡಿಯುವ ನೀರಿನ ಶುದ್ಧೀಕರಣದಲ್ಲಿ ಉಪಯೋಗಿಸುವ ರಾಸಾಯನಿಕಗಳ ಪರೀಕ್ಷೆ ಮಾಡಿದ ನಮೂನೆಗಳು. | |

6) **ಕೀಟನಾಶಕಗಳ ವಿಭಾಗ :**

| | | |
|---|---|---|
| | ಕೀಟನಾಶಕಗಳ ಪರೀಕ್ಷೆ ಮಾಡಿದ ನಮೂನೆಗಳು | 125 |
| 7) | ರಕ್ತನಾಳದಲ್ಲಿ ಕೊಡುವ ದ್ರವದ ಗುಣಮಟ್ಟಕ್ಕಾಗಿ ವಿಶ್ಲೇಷಿಸಿದ ನಮೂನೆಗಳು | 740 |
| 8) | ಅಂತರ ರಾಷ್ಟ್ರೀಯ ದೃಢೀಕರಣ ಪತ್ರಗಳು | 121 |
| 9) | ತರಬೇತಿ ಹೊಂದಿದ ಹಿರಿಯ ಪ್ರಯೋಗಶಾಲಾ ತಂತ್ರಜ್ಞರ ಸಂಖ್ಯೆ | 11 |

**ಈ ಸಂಸ್ಥೆಯ 1993-94ನೇ ಸಾಲಿನ ಆಯವ್ಯಯ ಪಟ್ಟಿ :**

| | | ಆಯವ್ಯಯ | ವೆಚ್ಚ |
|---|---|---|---|
| 1) | ಯೋಜನೆ | 6,74,000-00 | 2,48,705-00 |
| 2) | ಯೋಜನೇತರ | 75,00,000-00 | 64,11,546-00 |
| | ಒಟ್ಟು | 82,34,000-00 | 66,60,251-00 |

## ಸರ್ಕಾರಿ ಔಷಧಿ ಮಳಿಗೆ, ಬೆಂಗಳೂರು

ಈ ಸರ್ಕಾರಿ ಔಷಧಿ ಮಳಿಗೆಯು ಕೇಂದ್ರ ಔಷಧಿ ಮಳಿಗೆಯಾಗಿದ್ದು, ಬೆಂಗಳೂರಿನಲ್ಲಿ ಸ್ಥಾಪಿತವಾಗಿದೆ.

**ಈ ಮಳಿಗೆಯ ಮುಖ್ಯ ಉದ್ದೇಶಗಳು ಈ ಕೆಳಗಿನಂತಿವೆ :**

1) ನಿಯೋಜಿಸಲಾದ ಆಯವ್ಯಯದಲ್ಲಿ, ಸರ್ಕಾರದಿಂದ ಮಾನ್ಯತೆ ಪಡೆದ ದರ ಗುತ್ತಿಗೆದಾರರಿಂದ ಔಷಧಿಗಳನ್ನು, ರಾಸಾಯನಿಕಗಳನ್ನು ಹಾಗೂ ಶಸ್ತ್ರ ಚಿಕಿತ್ಸಾ ವಸ್ತುಗಳನ್ನು ಪಡೆಯಲಾಗುವುದು.

(ಅ) 1992-93ನೇ ಸಾಲಿಗಾಗಿ ಬಿಡುಗಡೆಯಾದ ಅನುದಾನವು ರೂಪಾಯಿ 16,04,44,865-00 ಗಳಾಗಿದ್ದು, 1993-94ನೇ ಸಾಲಿನಲ್ಲಿ ಈ ಅನುದಾನವು ಹೆಚ್ಚಿಸಲ್ಪಟ್ಟು ರೂ. 22,05,39,945-00 ಗಳು ಬಿಡುಗಡೆಯಾಗಿದ್ದು, ಇದರಲ್ಲಿ ಕುಟುಂಬ ಕಲ್ಯಾಣ ಯೋಜನೆಗಳು ಹಾಗೂ ಇತರೆ ಯೋಜನೆಗಳು 1993-94ನೇ ಸಾಲಿನಲ್ಲಿ ಸೇರಿಸಲ್ಪಟ್ಟಿವೆ.

(ಆ) ಸಕಾಲದಲ್ಲಿ ಹಾಗೂ ತೀವ್ರಗತಿಯಲ್ಲಿ ಈ ಔಷಧಿ ಮುಂತಾದವುಗಳು ರಾಜ್ಯದ ಎಲ್ಲಾ ಆರೋಗ್ಯ ಕೇಂದ್ರಗಳಿಗೆ ತಲುಪಿಸಲು, ಈ ಮಳಿಗೆಯಲ್ಲಿ ಗಣಕ ಯಂತ್ರಗಳನ್ನು ಅಳವಡಿಸಲಾಗಿದೆ. ತುರ್ತು ಪರಿಸ್ಥಿತಿಯಲ್ಲಿ ಅಂದರೆ ಪ್ರಕೃತಿ ವಿಕೋಪಗಳಾದ ಅತಿವೃಷ್ಟಿ, ಅನಾವೃಷ್ಟಿ ಹಾಗೂ ಭೂಕಂಪ ಮುಂತಾದ ಸಮಯದಲ್ಲಿ ಆ ಸಂದರ್ಭಕ್ಕೆ ಅವಶ್ಯಕವಾಗಿ ಬೇಕಾದಂತಹ ಔಷಧಿಗಳನ್ನು ಈ ಮಳಿಗೆಯಿಂದಲೇ ಸರಬರಾಜು ಮಾಡಲಾಗುತ್ತಿದೆ. ಅಲ್ಲದೆ ಔಷಧಿಗಳನ್ನು ವಿವಿದ ರಾಷ್ಟ್ರೀಯ ಕಾರ್ಯಕ್ರಮಗಳಡಿಯಲ್ಲಿ - ಕುಟುಂಬ ಕಲ್ಯಾಣ, ಅಂಧತ್ವ ನಿವಾರಣೆ, ಕುಷ್ಠರೋಗ ನಿವಾರಣೆ ಮುಂತಾದ ಕಾರ್ಯಕ್ರಮಗಳಿಗಾಗಿ ಔಷಧಿಗಳನ್ನು ಸರಬರಾಜು ಮಾಡಲಾಗುತ್ತಿದೆ.

(ಇ) ಸುಮಾರು ಐದು ಕೋಟಿ ರೂಪಾಯಿ ಮೊತ್ತದ ಔಷಧಿಗಳನ್ನು ಸಂಗ್ರಹಿಸಿ ಕಾಯ್ದಿಡಲಾಗಿದೆ. ಅದನ್ನು ತುರ್ತು ಸಂದರ್ಭಗಳಲ್ಲಿ ಅವಶ್ಯಕವಿರುವ ಆರೋಗ್ಯ ಕೇಂದ್ರಗಳಿಗೆ, ಆಸ್ಪತ್ರೆಗಳಿಗೆ, ಸಾಂಕ್ರಾಮಿಕ ರೋಗಗಳು ಉಂಟಾದಾಗ, ನೈಸರ್ಗಿಕ ವಿಕೋಪ ಉಂಟಾದಾಗ ಔಷಧಿಗಳನ್ನು ಸರಬರಾಜು ಮಾಡಲಾಗುವುದು.

2) ಈ ಔಷಧಿ, ರಾಸಾಯನಿಕಗಳನ್ನು ಈ ಮಳಿಗೆಯಲ್ಲಿ ಖರೀದಿಸುವ ಮುನ್ನ ತೆರಪ್ಯೂಟಿಕ್ ಸಮಿತಿಯಲ್ಲಿ ನಿರ್ಧರಿಸಿದ ಔಷಧಿಗನ್ನು ಖರೀದಿಸಲಾಗುವುದು. ನಂತರ ಈ ಬಗ್ಗೆ ಟೆಂಡರ್‌ಗಳನ್ನು ಕರೆದು, ಈ ಔಷಧಿಗಳ ಮೌಲ್ಯ ಹಾಗೂ ಬೆಲೆಗಳನ್ನು ತಜ್ಞರ ಸಮಿತಿಯ ಹಾಗೂ ಹೈ

ಪವರ್ ಕಮಿಟಿಯವರ ನಿರ್ಧಾರದ ನಂತರ ಸರ್ಕಾರದ ಅನುಮೋದನೆ ಪಡೆದ ನಂತರ ಖರೀದಿಸಲಾಗುವುದು.

3) ಔಷಧಿಗಳು ಮುಂತಾದುವುಗಳನ್ನು ಆರೋಗ್ಯ ಸಂಸ್ಥೆಗಳಿಗೆ ಸರಬರಾಜು ಮಾಡಲು ಅನುಕೂಲವಾಗುವಂತೆ ಈ ಮಳಿಗೆಯನ್ನು ನಾಲ್ಕು ಉಗ್ರಾಣ ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ.

1) ಎ.-ಉಗ್ರಾಣ (ಚುಚ್ಚು ಮದ್ದುಗಳು) - ಚುಚ್ಚುಮದ್ದುಗಳು ಹಾಗೂ ಸಂಬಂಧಿಸಿದ ವಸ್ತುಗಳನ್ನು ದಾಸ್ತಾನು ಮಾಡಿ ವಿತರಿಸುವ ವಿಭಾಗ.

2) ಎ-ಉಗ್ರಾಣ (ಮಾತ್ರೆಗಳು) - ಮಾತ್ರೆಗಳು, ಔಷಧಿಗಳ ಕೋಶಗಳನ್ನು ಸಂಗ್ರಹಿಸಿ ವಿತರಿಸುವ ವಿಭಾಗ.

3) ಬಿ-ಉಗ್ರಾಣ - ಔಷಧಿ ಪುಡಿಗಳು, ಮುಲಾಮುಗಳು, ಸೋಂಕು ನಿವಾರಣಾ ಔಷಧಿಗಳು, ಐ.ವಿ. ದ್ರವಗಳನ್ನು ಸಂಗ್ರಹಿಸಿ ವಿತರಿಸುವ ವಿಭಾಗ

4) ಸಿ-ಹಾಗೂ -ಡಿ ಉಗ್ರಾಣ - ಶಸ್ತ್ರಚಿಕಿತ್ಸೆಗೆ ಸಂಬಂಧಿಸಿದ ಪಕರಣಗಳು, ಗಾಯಕ್ಕೆ ಕಟ್ಟುವ ಬಟ್ಟೆ, ವೈದ್ಯಕೀಯ ಹತ್ತಿ, ಹೊಲಿಯುವ ವಸ್ತುಗಳು, ಹವಾನಿಯಂತ್ರಣದಲ್ಲಿ ದಾಸ್ತಾನು ಮಾಡಬೇಕಾಗಿರುವ ಔಷಧಿಗಳನ್ನು ಸಂಗ್ರಹಿಸಿ ವಿತರಿಸುವ ವಿಭಾಗ.

1993-94ನೇ ಸಾಲಿನಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಬಿಡುಗಡೆಯಾದ ಅನುದಾನ ಹಾಗೂ ಸರಬರಾಜು ಮಾಡಲ್ಪಟ್ಟ ವೆಚ್ಚದ ವಿವರಗಳು ಈ ಕೆಳಕಂಡಂತೆ ಇರುತ್ತವೆ.

| | ರೂ.ಗಳಲ್ಲಿ | ಬಿಡುಗಡೆಯಾದ ಅನುದಾನ (ರೂ.ಗಳಲ್ಲಿ) | ವೆಚ್ಚ ರೂ.ಗಳಲ್ಲಿ |
|---|---|---|---|
| 1) | ವೈದ್ಯಕೀಯ ಶಿಕ್ಷಣ | 5,71,42,800-00 | 5,71,20,974-00 |
| 2) | ಆರೋಗ್ಯ | 14,76,06,000-00 | 14,75,42,294-00 |
| 3) | ಕುಟುಂಬ ಕಲ್ಯಾಣ ಯೋಜನೆ | 1,57,91,145-00 | 1,57,90,264-00 |

**ಆರೋಗ್ಯ ಉಪಕರಣಗಳ ದುರಸ್ಥಿ ಮತ್ತು ನಿರ್ವಹಣೆಯ ಘಟಕ :**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ಆರೋಗ್ಯ ಸರಕರಣೆಗಳ ದುರಸ್ಥಿ ಮತ್ತು ನಿರ್ವಹಣ ಘಟಕವು ಆರೋಗ್ಯ ಉಪಕರಣಗಳ ಅಧಿಕಾರಿಯ ನೇತೃತ್ವದಲ್ಲಿ ನಿರ್ದೇಶನಾಲಯದಡಿಯಲ್ಲಿ ಬರುವ ಎಲ್ಲಾ ಆಸ್ಪತ್ರೆಯ ಉಪಕರಣಗಳ ದುರಸ್ಥಿ ಕಾರ್ಯ ಹಾಗೂ ನಿರ್ವಹಣೆಯ ಕಾರ್ಯವನ್ನು ನಿರ್ವಹಿಸುತ್ತಿದೆ.

**ಮುಖ್ಯ ಕಾರ್ಯಚಟುವಟಿಕೆಗಳು :**

1) ಉಪಕರಣಗಳ ದಾಖಲೆಗಳನ್ನಿಡುವುದು
2) ಉಪಕರಣಗಳ ಮಾನಿಟರ್ ಮಾಡುವುದು
3) ಉಪಕರಣಗಳ ದುರಸ್ಥಿ ಮತ್ತು ನಿರ್ವಹಣೆಯ ಕಾರ್ಯ.
4) ವಿಧವಿಧವಾದ ಉಪಕರಣಗಳ ಟೆಂಡರ್ ಕರೆದು ಇದರ ಇತ್ಯರ್ಥಕ್ಕೆ ಮುಂದಕ್ಕೆ ಕಳುಹಿಸುವುದು.
5) ಉಪಕರಣಗಳು ಪೂರೈಕೆಯಾದ ನಂತರ ಅವುಗಳ ಬುನಾದಿ ಗೊಳಿಸುವುದನ್ನು ಮೇಲ್ವಿಚಾರಣೆ ಮಾಡುವುದು.

ಒಪೆಕ್‌ಅಡಿಯಲ್ಲಿ ಜಿಲ್ಲಾ ಆಸ್ಪತ್ರೆ ರಾಯಚೂರಿಗೆ ಉಪಕರಣಗಳನ್ನು ಖರೀದಿಸಲು ಆಸ್ಪತ್ರೆ ಕನ್ಸಲ್ಟೆನ್ಸಿಯನ್ನು ನಿಯಮಿಸುವ ಕಾರ್ಯವು ಕೊನೆಯ ಹಂತದಲ್ಲಿದೆ.

ಅತ್ಯಾಧುನಿಕ ಉಪಕರಣಗಳನ್ನು ಪೂರೈಸಲು ವೈದ್ಯಕೀಯ ನಿರ್ದೇಶನಾಲಯದಡಿಯಲ್ಲಿ ಟೆಂಡರ್ ಕರೆದು ಇದರ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲಾಗಿದೆ.

## ಸಾಧನೆಗಳು

1993-94ನೇ ಸಾಲಿನಲ್ಲಿ 1,21,55,200 ರೂ.ಗಳ ಬೆಲೆಯ ವಿವಿಧ ಸಾಮರ್ಥ್ಯದ ಕ್ಷ-ಕಿರಣ ಯಂತ್ರಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಡಿಯಲ್ಲಿ ಬರುವ ಆಸ್ಪತ್ರೆಗಳಿಗೆ ಒದಗಿಸಿದ್ದು, ಇದರ ಜೊತೆಗೆ ಸುಮಾರು 16 ಲಕ್ಷ ರೂ.ಗಳ 50 ಕೆ.ವಿ.ಎ. ಸಾಮರ್ಥ್ಯದ ಆರು ವಿದ್ಯುತ್ ಜನಕವನ್ನು ವಿವಿಧ ಸಂಸ್ಥೆಗಳಿಗೆ ಪೂರೈಸಲಾಗಿದೆ.

1993-94ನೇ ಸಾಲಿನಲ್ಲಿ ವಿವಿಧ ಉಪಕರಣಗಳನ್ನು ಪರಿಶೀಲಿಸಿ ದುರಸ್ಥಿಗೊಳಿಸಿದ ಬಗೆಗಿನ ವಿವರಗಳು ಈ ಕೆಳಕಂಡಂತಿವೆ.

| | | |
|---|---|---|
| 1) | ಕ್ಷ-ಕಿರಣಗಳನ್ನು ಪರಿಶೀಲಿಸಿದ್ದು | 90 |
| 2) | ಕಾರ್ಯ ನಿರ್ವಹಿಸುತ್ತಿದ್ದದ್ದು | 30 |
| 3) | ಕಾರ್ಯ ನಿರ್ವಹಿಸುತ್ತಿಲ್ಲದ್ದು | 60 |
| 4) | ದುರಸ್ಥಿಗೊಳಿಸಿದ್ದು | 40 |
| 5) | ದುರಸ್ಥಿಗೊಳಿಸಲಾಗದಿದ್ದದ್ದು | 20 |

(ಇದಕ್ಕೆ ಬೇಕಾದ ಬಿಡಿ ಭಾಗಗಳು ಇಲ್ಲದಿರುವುದು
ಮತ್ತು ಅತಿ ದೊಡ್ಡ ದುರಸ್ಥಿ ಇದ್ದುದ್ದರಿಂದ)

6) ನಿರುಪಯುಕ್ತಗೊಳಿಸಿದ ಕ್ಷ-ಕಿರಣ ಯಂತ್ರಗಳನ್ನು
ಬಿಚ್ಚಿ ಹಾಕಿರುವುದು 3

ಇದರ ಜೊತೆಗೆ ಹೆಚ್.ಪಿ. ಸ್ಟೆರಿಲೈಸರ್, ಸೆಕ್ಷನ್ ಅಪರೇಟಸ್, ಡಯಾಥರ್ಮಿ ಮುಂತಾದ 10 ಉಪಕರಣಗಳನ್ನು ಪರಿಶೀಲಿಸಿ, 5ನ್ನು ದುರಸ್ಥಿಗೊಳಿಸಲಾಗಿದೆ ಮತ್ತು ಉಳಿದ 5ನ್ನು ಬಿಡಿ ಭಾಗಗಳ ಕೊರತೆಯಿಂದ ದುರಸ್ಥಿಗೊಳಿಸಲಾಗಲಿಲ್ಲ.

## ರಾಜ್ಯ ಆರೋಗ್ಯ ಸಾರಿಗೆ ಸಂಸ್ಥೆ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿರುವ ಸಾರಿಗೆ ವಿಭಾಗವು ಅನೇಕ ಕಾರ್ಯಕ್ರಮಗಳಿಗೆ ಸೇತುವೆಯಾಗಿದೆ. ಅವು ಯಾವುವೆಂದರೆ, ರಾಷ್ಟ್ರೀಯ ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮ (ಎನ್‌ಎಂಇಪಿ), ರಾಷ್ಟ್ರೀಯ ಕುಷ್ಠ ರೋಗ ನಿರ್ಮೂಲನಾ ಕಾರ್ಯಕ್ರಮ, ರಾಷ್ಟ್ರೀಯ ಅಂಧತ್ವ ನಿರ್ಮೂಲನಾ ಯೋಜನೆ (ಎನ್‌ಪಿಸಿಬಿ), ಏಡ್ಸ್ ಹಾಗೂ ಫೈಲೇರಿಯಾ ಕಾರ್ಯಕ್ರಮ ಮುಂತಾದವುಗಳು.

ಕೇಂದ್ರ ಕಾರ್ಯಾಗಾರವು ಬೆಂಗಳೂರಿನ ಮಾಗಡಿ ರಸ್ತೆಯಲ್ಲಿದ್ದು, ಉಪನಿರ್ದೇಶಕರು (ಸಾರಿಗೆ) ಇವರ ಮೇಲ್ವಿಚಾರಣೆಯಲ್ಲಿದೆ. ಅವರ ಕಾರ್ಯವ್ಯವಸ್ಥಾಪಕರು, ಮೂರು ಜನ ಸೇವಾ ಅಭಿಯಂತರರು ಹಾಗೂ ತಾಂತ್ರಿಕ ಸಿಬ್ಬಂದಿಯನ್ನು ಈ ಸಂಸ್ಥೆಯು ಒಳಗೊಂಡಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಮತ್ತು ವೈದ್ಯಕೀಯ ಶಿಕ್ಷಣ ಇಲಾಖೆಯ ಅಧೀನದಲ್ಲಿರುವ ವಾಹನಗಳ ದೊಡ್ಡ ಹಾಗೂ ಸಣ್ಣ ಪ್ರಮಾಣದ ದುರಸ್ಥಿ ಕಾರ್ಯಗಳನ್ನು ಮಾಡುವುದು, ನಿರುಪಯುಕ್ತ ವಾಹನಗಳ ಮತ್ತು ನಿರುಪಯುಕ್ತ ಸಾಮಗ್ರಿಗಳ ವಿಲೇವಾರಿ ಮಾಡುವುದು ಈ ಸಂಸ್ಥೆಯ ಮುಖ್ಯ ಉದ್ದೇಶವಾಗಿರುತ್ತದೆ.

ಕೇಂದ್ರ ಕಾರ್ಯಾಗಾರದಲ್ಲಿ ಸರಾಸರಿ 50-60 ವಾಹನಗಳು ಪ್ರತಿ ತಿಂಗಳೂ ದುರಸ್ಥಿ ಮಾಡಲ್ಪಡುತ್ತದೆ. ಜಿಲ್ಲಾ ಪರಿಷತ್ ವ್ಯಾಪ್ತಿಗೊಳಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿಯ ವಾಹನಗಳನ್ನು ಆಯಾ ಜಿಲ್ಲೆಗಳಲ್ಲಿರುವ ಸೇವಾ ಅಭಿಯಂತರರು ಹಾಗೂ ತಾಂತ್ರಿಕ ಸಿಬ್ಬಂದಿಯನ್ನೊಳಗೊಂಡ ಸಂಚಾರಿ ನಿಯಂತ್ರಣ ಘಟಕಗಳು ದುರಸ್ಥಿ ಮಾಡುತ್ತಿವೆ.

ಇದಲ್ಲದೆ ಭಾರತೀಯ ಜನಸಂಖ್ಯಾ ಯೋಜನೆ ಕಾರ್ಯಕ್ರಮದ ವಾಹನಗಳ ದುರಸ್ಥಿ ಹಾಗೂ ಮೇಲ್ವಿಚಾರಣೆಗಾಗಿ ಗುಲ್ಬರ್ಗಾ ಮತ್ತು ಹುಬ್ಬಳ್ಳಿಯಲ್ಲಿ ಎರಡು ಪ್ರಾಂತೀಯ ಕಾರ್ಯಾಗಾರಗಳು ಸ್ಥಾಪಿಸಲ್ಪಟ್ಟಿವೆ.

1993-94ನೇ ಸಾಲಿನಲ್ಲಿ ಈ ಇಲಾಖೆಯಲ್ಲಿ ಒಟ್ಟು 1683 ವಾಹನಗಳಿದ್ದು, 850 ವಾಹನಗಳು ಚಲನ ಸ್ಥಿತಿಯಲ್ಲಿ, 607 ವಾಹನಗಳು ನಿರುಪಯುಕ್ತಗೊಳಿಸಲ್ಪಟ್ಟಿದ್ದು, 226 ವಾಹನಗಳು ಕಾರಣಾಂತರಗಳಿಂದ ಅಚಲನ ಸ್ಥಿತಿಯಲ್ಲಿವೆ.

ಕಾರ್ಯಕ್ರಮಗಳನ್ನು ತ್ವರಿತವಾಗಿ ಜಾರಿಗೊಳಿಸಲು ಗರಿಷ್ಠ ಸಂಖ್ಯೆಯಲ್ಲಿ ವಾಹನಗಳು ಸುಸ್ಥಿತಿಯಲ್ಲಿರಲು ಅದಷ್ಟು ಶೀಘ್ರವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ.

## ಸಾಮಾನ್ಯ ಆಡಳಿತ :

## ಗುತ್ತಿಗೆ ಆಧಾರದ ಮೇಲೆ ವೈದ್ಯರುಗಳ ನೇಮಕಾತಿ :

1993-94ನೇ ಸಾಲಿನಲ್ಲಿ ಗ್ರಾಮೀಣ ಜನತೆಗೆ ವೈದ್ಯಕೀಯ ಸವಲತ್ತುಗಳನ್ನು ಒದಗಿಸುವ ದೃಷ್ಟಿಯಿಂದ 374 ವೈದ್ಯರುಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿದೆ.

## ವೈದ್ಯರುಗಳಿಗೆ ಕಾಲಮಿತಿ ಬಡ್ತಿ ಮಂಜೂರಾತಿ :

ಸರ್ಕಾರವು ತನ್ನ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ 222 ಎಂಎಸ್‌ಎಸ್ 90, ದಿನಾಂಕ 17-7-91ರ ಪ್ರಕಾರ, ಸೇವೆಯಲ್ಲಿದ್ದ ವೈದ್ಯರುಗಳಿಗೆ ಅವರ ಕರ್ತವ್ಯದಲ್ಲಿ ಹೆಚ್ಚಿನ ಆಸಕ್ತಿ ಹೊಂದುವಂತೆ ಅವರ ಮನವೊಲಿಸಲು ಹಾಗೂ ಇಲಾಖೆಯ ಕಾರ್ಯದಕ್ಷತೆಯನ್ನು ಹೆಚ್ಚಿಸಲು ಸಾಕಷ್ಟು ಪದೋನ್ನತಿಯ ಅವಕಾಶಗಳನ್ನು ಒದಗಿಸುವ ದೃಷ್ಟಿಯಿಂದ ಕಾಲಮಿತಿ ಪದೋನ್ನತಿಯ ಯೋಜನೆಯೊಂದನ್ನು ಜಾರಿಗೆ ತಂದಿದೆ. ನಂತರ ಸರ್ಕಾರಿ ಆದೇಶದ ಸಂಖ್ಯೆ : ಡಿಪಿಎಆರ್ 44 ಎಸ್‌ಸಿಆರ್ 92, ದಿನಾಂಕ 15-9-92ರ ಅನ್ವಯ ಹುದ್ದೆ ಮತ್ತು ನೇಮಕಾತಿ ನಿಯಮಗಳಿಗೆ ಸೂಕ್ತ ತಿದ್ದುಪಡಿಯನ್ನು ಹೊರಡಿಸಿದೆ. ಆ ಮೇರೆಗೆ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ 88 ಎಂಎಸ್‌ಎಸ್ 93-1, ದಿನಾಂಕ 24-1-94ರ ಪ್ರಕಾರ 275 ವೈದ್ಯರುಗಳಿಗೆ ಉಪ ಮುಖ್ಯ ವೈದ್ಯಾಧಿಕಾರಿ : ಹಿರಿಯ ತಜ್ಞರಾಗಿ, 1033 ವೈದ್ಯರುಗಳಿಗೆ ಹಿರಿಯ ವೈದ್ಯಾಧಿಕಾರಿ : ತಜ್ಞರಾಗಿ ಹಾಗೂ 93 ವೈದ್ಯರುಗಳನ್ನು ಹಿರಿಯ ವೈದ್ಯಾಧಿಕಾರಿಗಳನ್ನಾಗಿ ಪದೋನ್ನತಿಗೊಳಿಸಲಾಗಿದೆ. ಇದಲ್ಲದೆ 967 ವೈದ್ಯರನ್ನು ತಜ್ಞರು : ಹಿರಿಯ ವೈದ್ಯಾಧಿಕಾರಿಗಳೆಂದು ಮತ್ತು 93 ವೈದ್ಯರನ್ನು ಹಿರಿಯ ವೈದ್ಯರುಗಳೆಂದು ಪದೋನ್ನತಿಗೊಳಿಸಲಾಗಿದೆ.

## "ಸಿ" ಮತ್ತು "ಡಿ" ಗುಂಪಿನ ನೌಕರರ ನೇಮಕಾತಿ ನಿರ್ಬಂಧವನ್ನು ರದ್ದುಗೊಳಿಸುವಿಕೆ :

1993-94ನೇ ಸಾಲಿನಲ್ಲಿ 550 ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಅವರನ್ನು ನೇಮಕ ಮಾಡಲಾಗಿದೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಸಿಬ್ಬಂದಿ ವರ್ಗದ ಮಾಹಿತಿ :

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಸಿಬ್ಬಂದಿ ವರ್ಗದವರ ಹುದ್ದೆವಾರು ವಿವರಗಳನ್ನು ಅನುಬಂಧದಲ್ಲಿ ತೋರಿಸಲಾಗಿದೆ.

# ಅನುಬಂಧ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಸಿಬ್ಬಂದಿ ವರ್ಗ - ಹುದ್ದೆವಾರು ಮಾಹಿತಿ ದಿನಾಂಕ 31.3.94 ರಲ್ಲಿದ್ದಂತೆ

| ಕ್ರಮ ಸಂಖ್ಯೆ | ಹುದ್ದೆಗಳ ಹೆಸರು | ಮಂಜೂರಾದ ಹುದ್ದೆಗಳು | ಕೆಲಸ ಮಾಡುತ್ತಿರುವವರ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1) | ನಿರ್ದೇಶಕರು ಆರೋಗ್ಯ ಮತ್ತು ಕು.ಕ. ಸೇವೆಗಳು | 1 | 1 | 1 |
| 2) | ನಿರ್ದೇಶಕರು, ಆರೋಗ್ಯ ಶಿಕ್ಷಣ ಮತ್ತು ತರಬೇತಿ | 1 | - | 1 |
| 3) | ಅಪರ ನಿರ್ದೇಶಕರು, ಕುಟುಂಬ ಕಲ್ಯಾಣ ಮತ್ತು ತಾಯಿ ಮಕ್ಕಳ ಆರೋಗ್ಯ | 1 | 1 | - |
| 4) | ಪ್ರಾಜೆಕ್ಟ್ ಕೋ-ಆರ್ಡಿನೇಟರ್ (ಐಪಿಪಿ) | 1 | 1 | - |
| 5) | ಆರೋಗ್ಯಾಧಿಕಾರಿ (ಬೆಂಗಳೂರು ಮಹಾನಗರ ಪಾಲಿಕೆ, ಜಂಟೀ ನಿರ್ದೇಶಕರು ಕಾರ್ಯ ನಿರ್ವಹಿಸುತ್ತಿರುತ್ತಾರೆ) | 1 | 1 | - |
| 6) | ಜಂಟೀ ನಿರ್ದೇಶಕರುಗಳು | 17 | 17 | - |
| 7) | ಆರೋಗ್ಯಾಧಿಕಾರಿಗಳು (ದರ್ಜೆ -1 ಹಿರಿಯ) | 63 | 45 | 18 |
| 8) | ಶಸ್ತ್ರ ಚಿಕಿತ್ಸಕರುಗಳು | 125 | 113 | 12 |
| 9) | ಅಧೀಕ್ಷಕರುಗಳನ್ನು, ಟಿ.ಬಿ. ಆಸ್ಪತ್ರೆ | 10 | 7 | 3 |
| 10) | ಆರೋಗ್ಯಾಧಿಕಾರಿಗಳು, ದರ್ಜೆ-1 (ಕಿರಿಯ) | 440 | 328 | 112 |
| 11) | ಜಂಟಿ ನಿರ್ದೇಶಕರು (ಮಾ.ಶಿ.ಸಂ) | 1 | 1 | - |
| 12) | ಆರೋಗ್ಯಾಧಿಕಾರಿಗಳು ಹಾಗೂ ಸಹಾಯಕ ಶಸ್ತ್ರ ಚಿಕಿತ್ಸಕರುಗಳು | 3781 | 3340 | 441 |

| | | | | |
|---|---|---|---|---|
| 13) | ಮುಖ್ಯ ಆಡಳಿತಾಧಿಕಾರಿ | 1 | 1 | - |
| 14) | ಮುಖ್ಯ ಲೆಕ್ಕಪತ್ರಾಧಿಕಾರಿಗಳು ಹಾಗೂ ಆರ್ಥಿಕ ಸಲಹೆಗಾರರು | 1 | 1 | - |
| 15) | ಉಪ ನಿರ್ದೇಶಕರು (ಪೌಷ್ಠಿಕ ಆಹಾರ) | 1 | 1 | - |
| 16) | ದಂತ ಶಸ್ತ್ರ ಚಿಕಿತ್ಸಕರುಗಳು | 2 | 2 | - |
| 17) | ಉಪ ದಂತ ಶಸ್ತ್ರ ಚಿಕಿತ್ಸಕರುಗಳು | 33 | 21 | 12 |
| 18) | ಸಹಾಯಕ ದಂತ ಶಸ್ತ್ರ ಚಿಕಿತ್ಸಕರುಗಳು | 113 | 53 | 60 |
| 19) | ಮುಖ್ಯ ಫಾರ್ಮಸಿಸ್ಟ್‌ಗಳು | 17 | 14 | 3 |
| 20) | ಪದವೀಧರ ಫಾರ್ಮಾಸಿಸ್ಟ್‌ಗಳು | 39 | 32 | 7 |
| 21) | ಚೀಫ್ ಕೆಮಿಸ್ಟ್ ಮತ್ತು ಪಬ್ಲಿಕ್ ಅನಲಿಸ್ಟ್‌ಗಳು | 1 | 1 | - |
| 22) | ಹಿರಿಯ ಕೆಮಿಸ್ಟ್ ಮತ್ತು ಪಬ್ಲಿಕ್ ಅನಲಿಸ್ಟ್‌ಗಳು | 6 | 4 | 2 |
| 23) | ಕೆಮಿಸ್ಟ್ : ಫುಡ್ ಅನಲಿಸ್ಟ್‌ಗಳು | 11 | 6 | 5 |
| 24) | ಸಹಾಯಕ ಪೌಷ್ಠಿಕ ಆಹಾರ ಅಧಿಕಾರಿಗಳು | 5 | 2 | 3 |
| 25) | ಸೈಂಟಿಫಿಕ್ ಆಫೀಸರ್ | 1 | 1 | - |
| 26) | ಹೆಲ್ತ್ ಎಕ್ವಿಪ್‌ಮೆಂಟ್ ಆಫೀಸರ್‌ಗಳು | 1 | 1 | |
| 27) | ಸಹಾಯಕ ಎಕ್ಸಿಕ್ಯೂಟಿವ್ ಇಂಜನಿಯರ್ (ವ್ಯಾಕ್ಸಿನ್ ಇನ್ಸ್‌ಟ್ಯಿಟ್ಯೂಟ್, ಬೆಳಗಾವಿ) | 1 | - | 1 |
| 28) | ಯೋಜನಾಧಿಕಾರಿ | 1 | 1 | - |
| 29) | ಸಹಾಯಕ ಉಪ ನಿರ್ದೇಶಕರು (ಆ.ಶಿ. ಮತ್ತು ಶಾ.ಆ) | 1 | 1 | - |
| 30) | ಉಪ ನಿರ್ದೇಶಕರು (ಎಸ್.ಹೆಚ್.ಇ.ಯೂ) | 1 | 1 | - |
| 31) | ತಾಂತ್ರಿಕ ಅಧಿಕಾರಿ (ಶ್ರ.ಬಾ) | 1 | 1 | - |
| 32) | ತಾಂತ್ರಿಕ ಅಧಿಕಾರಿ (ಎಫ್.ಎಸ್.ಡಿ.ಸಿ) | 1 | - | 1 |
| 33) | ತಾಂತ್ರಿಕ ಅಧಿಕಾರಿ (ಗಾಯಿಟರ್) | 1 | 1 | - |
| 34) | ತಾಂತ್ರಿಕ ಅಧಿಕಾರಿ (ವಸ್ತು ಪ್ರದರ್ಶನ) | 1 | 1 | - |
| 35) | ಉಪ ನಿರ್ದೇಶಕರು (ಫಾರ್ಮಸಿ) | 1 | 1 | - |

| | | | | |
|---|---|---|---|---|
| 36) | ಉಪ ನಿರ್ದೇಶಕರು (ಸಾರಿಗೆ) | 1 | - | 1 |
| 37) | ಕಿರಿಯ ಫಿಸಿಸ್ಟ್‌ಗಳು | 2 | 1 | 1 |
| 38) | ಹಿರಿಯ ಎಂಟಮಾಲಜಿಸ್ಟ್‌ಗಳು | 3 | - | 3 |
| 39) | ಬಯೋಕೆಮಿಸ್ಟ್ | 2 | - | 2 |
| 40) | ಸಹಾಯಕ ಎಂಟೊಮಾಲಜಿಸ್ಟ್‌ಗಳು | 6 | 5 | 1 |
| 41) | ಮೈಕ್ರೋ ಬಯಾಲಜಿಸ್ಟ್ | 1 | - | 1 |
| 42) | ಲೆ ಸೆಕ್ರೆಟರಿ:ಪತ್ರಾಂಕಿತ ಸಹಾಯಕರುಗಳು | 64 | 24 | 40 |
| 43) | ಆಡಳಿತಾಧಿಕಾರಿಗಳು | 4 | - | 4 |
| 44) | ವೈದ್ಯಕೀಯ ದಾಖಲಾತಿ ಅಧಿಕಾರಿಗಳು | 3 | 1 | 2 |
| 45) | ಸರ್ವೀಸ್ ಇಂಜನಿಯರುಗಳು | 20 | 8 | 12 |
| 46) | ಅಧೀಕ್ಷಕ ದಾದಿಯರು, ದರ್ಜೆ-1 | 46 | 7 | 39 |
| 47) | ಅಧೀಕ್ಷಕ ದಾದಿಯರುಗಳು, ದರ್ಜೆ-2 | 308 | 287 | 21 |
| 48) | ನರ್ಸಿಂಗ್ ಟ್ಯೂಟರ್‌ಗಳು | 68 | 66 | 2 |
| 49) | ಹಿರಿಯ ದಾದಿಯರು | 600 | 450 | 150 |
| 50) | ಪ್ರಾಂಶುಪಾಲರು, ದಾದಿಯರ ಶಾಲೆ | 9 | 2 | 7 |
| 51) | ಉಪನ್ಯಾಸಕರು, ದಾದಿಯರ ಮಹಾವಿದ್ಯಾಲಯ | 5 | - | 5 |
| 52) | ಪ್ರಾಧ್ಯಾಪಕರು, ದಾದಿಯರ ಮಹಾವಿದ್ಯಾಲಯ | 5 | 1 | 4 |
| 53) | ಸಹಾಯಕ ಪ್ರಾಧ್ಯಾಪಕರು ದಾದಿಯರ ಮಹಾವಿದ್ಯಾಲಯ | 5 | 3 | 2 |
| 54) | ಪ್ರಾಂಶುಪಾಲರು, ದಾದಿಯರ ಮಹಾವಿದ್ಯಾಲಯ | 1 | - | 1 |
| 55) | ಕ್ಲಿನಿಕಲ್ ಇನ್‌ಸ್ಟ್ರಕ್ಟರುಗಳು,. ದಾದಿಯರ ಮಹಾವಿದ್ಯಾಲಯ | 4 | 4 | - |
| 56) | ಶುಶ್ರೂಷಕಿಯರು | 4189 | 4010 | 179 |
| 57) | ಹಿರಿಯ ಆರೋಗ್ಯ ಸಹಾಯಕರು | 1221 | 1100 | 121 |

| | | | |
|---|---|---|---|
| 58) ಹಿರಿಯ ಆರೋಗ್ಯ ಪರಿವೀಕ್ಷಕರುಗಳು, ಗ್ರೂಪ್-ಸಿ | 76 | 70 | 6 |
| 59) ಹಿರಿಯ ಆರೋಗ್ಯ ಪರಿವೀಕ್ಷಕರುಗಳು, ಗ್ರೂಪ್-ಬಿ | 21 | 5 | 16 |
| 60) ಸಹಾಯಕ ಕುಷ್ಠರೋಗಾಧಿಕಾರಿಗಳು | 13 | - | 13 |
| 61) ಹಿರಿಯ ವೈದ್ಯೇತರ ಪರಿವೀಕ್ಷಕರುಗಳು | 102 | 95 | 7 |
| 62) ಕಿರಿಯ ವೈದ್ಯೇತರ ಪರಿವೀಕ್ಷಕರುಗಳು | 184 | 175 | 9 |
| 63) ಕಿರಿಯ ಆರೋಗ್ಯ ಸಹಾಯಕರುಗಳು (ಪುರುಷರು) | 5556 | 4843 | 713 |
| 64) ಅರೆ ವೈದ್ಯಕೀಯ ಕಾರ್ಯಕರ್ತರುಗಳು | 1231 | 709 | 522 |
| 65) ಹಿರಿಯ ಪ್ರಯೋಗಶಾಲಾ ತಂತ್ರಜ್ಞರುಗಳು | 303 | 255 | 48 |
| 66) ಕಿರಿಯ ಪ್ರಯೋಗಶಾಲಾ ತಂತಜ್ಞರುಗಳು | 1627 | 1007 | 620 |
| 67) ಕ್ಷ-ಕಿರಣ ತಂತ್ರಜ್ಞರುಗಳು | 249 | 238 | 11 |
| 68) ರೇಡಿಯೋಗ್ರಾಫರ್‌ಗಳು | 42 | 34 | 8 |
| 69) ರಿಫ್ರಾಕ್ಷನಿಸ್ಟ್‌ಗಳು | 367 | 295 | 72 |
| 70) ಆರ್ಥೋಪಿಸ್ಟ್‌ಗಳು | 7 | 7 | - |
| 71) ಸಹಾಯಕ ವೈದ್ಯ ದಾಖಲಾತಿ ಅಧಿಕಾರಿಗಳು | 11 | 10 | 1 |
| 72) ವೈದ್ಯ ದಾಖಲಾತಿ ತಂತ್ರಜ್ಞರುಗಳು | 29 | 20 | 9 |
| 73) ಫಿಸಿಯೋಥೆರಪಿಸ್ಟ್‌ಗಳು (ಸಾಮಾನ್ಯ) | 33 | 21 | 12 |
| 74) ಫಿಸಿಯೋಥೆರಪಿಸ್ಟ್‌ಗಳು (ಕುಷ್ಠರೋಗ) | 52 | 28 | 24 |
| 75) ಎಲೆಕ್ಟ್ರೀಷಿಯನ್‌ಗಳು | 44 | 28 | 16 |
| 76) ಕ್ಲಿನಿಕಲ್ ಸೈಕಲಾಜಿಸ್ಟ್‌ಗಳು | 13 | 7 | 6 |
| 77) ಡೆಂಟಲ್ ಮೆಕಾನಿಕ್‌ಗಳು | 31 | 26 | 5 |
| 78) ಡೆಂಟಲ್ ಹೈಜಿಯನಿಸ್ಟ್‌ಗಳು | 9 | 8 | 1 |
| 79) ಡಯಟೀಷಿಯನ್‌ಗಳು | 8 | 5 | 3 |

| | | | | |
|---|---|---|---|---|
| 80) | ಜೂನಿಯರ್ ಕೆಮಿಸ್ಟ್‌ಗಳು | 24 | 8 | 16 |
| 81) | ಸೋಷಿಯಲ್ ವರ್ಕರ್‌ಗಳು (ಎಸ್‌ಟಿಡಿ) | 26 | 22 | 4 |
| 82) | ಮೆಕ್ಯಾನಿಕ್ಸ್ ಕ್ಲಾಸ್-1(ಕಿರಿಯ) | 3 | 3 | - |
| 83) | ಆಕ್ಯುಪೇಷನಲ್ ಥೆರಪಿಸ್ಟ್‌ಗಳು | 5 | - | 5 |
| 84) | ಪಂಪ್ ಮೆಕ್ಯಾನಿಕ್‌ಗಳು | 1 | 1 | - |
| 85) | ವೈರ್‌ಮ್ಯಾನ್ | 1 | 1 | - |
| 86) | ಮಾಡಲರ್‌ಗಳು | 4 | 4 | - |
| 87) | ಕಲೆ ಹಾಗೂ ಛಾಯಾಗ್ರಾಹಕರುಗಳು | 8 | 1 | 7 |
| 88) | ಕಲೆಗಾರರುಗಳು | 2 | - | 2 |
| 89) | ಡ್ರಾಫ್ಟ್‌ಮನ್ | 1 | 1 | - |
| 90) | ಫಿಜಿಕಲ್ ಕಲ್ಚರ್ ಇನ್‌ಸ್ಟ್ರಕ್ಟರ್‌ಗಳ | 4 | 4 | - |
| 91) | ಆಟೋ ಕ್ಲೇವ್ ಮೆಕ್ಯಾನಿಕ್‌ಗಳು | 3 | 1 | 2 |
| 92) | ಬಾಯ್ಲರ್ ಅಟೆಂಡರ್ | 1 | 1 | - |
| 93) | ಕತ್ತಲೆ ಕೊಠಡಿ ಸಹಾಯಕರುಗಳು | 3 | - | 3 |
| 94) | ಎಂಟಮಾಲಜಿಕಲ್ ಅಸಿಸ್ಟೆಂಟ್‌ಗಳು | 4 | 2 | 2 |
| 95) | ಸೈಂಟಿಫಿಕ್ ಅಸಿಸ್ಟೆಂಟ್‌ಗಳು | 4 | 3 | 1 |
| 96) | ಏರ್‌ಕಂಡೀಷನ್ ಅಪರೇಟರುಗಳು | 2 | 1 | 1 |
| 97) | ಅಧೀಕ್ಷಕರುಗಳು (ತಾಂತ್ರಿಕ) | 1 | 1 | - |
| 98) | ಪ್ರಿಂಟಿಂಗ್ ಇನ್‌ಸ್ಟ್ರಕ್ಟರ್‌ಗಳು | 1 | 1 | - |
| 99) | ವೀವಿಂಗ್ ಇನ್‌ಸ್ಟ್ರಕ್ಟರ್‌ಗಳು | 1 | 1 | - |
| 100) | ಲೂಮ್ ಮೆಕಾನಿಕ್ | 1 | 1 | - |
| 101) | ಹೆಲ್ತ್ ಎಕ್ಯುಪ್‌ಮೆಂಟ್ ಅಂಡ್ ರಿಪೇರಿ ಸೂಪರ್‌ವೈಸರ್ | 4 | 1 | 3 |
| 102) | ಜೂನಿಯರ್ ಇಂಜಿನಿಯರ್ | 1 | 1 | - |
| 103) | ಕ್ರಾಫ್ಟ್ಸ್‌ಮ್ಯಾನ್ | 1 | 1 | - |
| 104) | ಉಪ ಸಂಪಾದಕ | 1 | 1 | - |
| 105) | ಹೋಂ ಸೈನ್ಸ್ ಅಸಿಸ್ಟೆಂಟ್ | 1 | 1 | - |

| | | | | |
|---|---|---|---|---|
| 106) | ಸಿಲ್ಕ್ ಸ್ಕ್ರೀನ್ ಟೆಕ್ನೀಷಿಯನ್ | 1 | 1 | - |
| 107) | ಪ್ರೊಸ್ತೆಟಿಕ್ ಟೆಕ್ನೀಷಿಯನ್ ದರ್ಜೆ-2 | 3 | 1 | 2 |
| 108) | ಲೆದರ್ ವರ್ಕರ್‌ಗಳು | 2 | 1 | 1 |
| 109) | ಆಪ್ಟಿಕಲ್ ಮೆಕಾನಿಕ್ | 1 | 1 | - |
| 110) | ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ | 1 | 1 | |
| 111) | ಉಪಾಧ್ಯಾಯರು | 1 | 1 | - |
| 112) | ಸ್ಪೀಚ್‌ಪೆಥಾಲಜಿಸ್ಟ್ ಅಂಡ್ ಆಡಿಯೋಲಜಿಸ್ಟ್ | 1 | - | 1 |
| 113) | ಸೂಪರಿಂಟೆಂಡೆಂಟ್ (ವೆಟರ್‌ನರಿ) | 1 | - | 1 |
| 114) | ಸ್ಪೀಚ್ ಥೆರಾಪಿಸ್ಟ್ | 1 | - | 1 |
| 115) | ಕಾರ್‌ಪೆಂಟರ್‌ಗಳು (ಬಡಗಿ) | 3 | - | 3 |
| 116) | ರೆಫ್ರಿಜಿರೇಟರ್ ಮೆಕಾನಿಕ್‌ಗಳು | 3 | 1 | 2 |
| 117) | ಹಿರಿಯ ಫಾರ್ಮಸಿಸ್ಟ್ | 443 | 404 | 39 |
| 118) | ಕಿರಿಯ ಫಾರ್ಮಸಿಸ್ಟ್ | 1983 | 1622 | 361 |
| 119) | ಚಾಲಕರು | 1053 | 925 | 128 |
| 120) | ಮಾಸ್ಟರ್ ಆರ್ಟಿಸಾನ್ | 30 | 25 | 5 |
| 121) | ಸ್ಕಿಲ್ಡ್ ಮೆಕ್ಯಾನಿಕ್‌ಗಳು | 16 | 4 | 12 |
| 122) | ಸ್ಕಿಲ್ಡ್ ಟ್ರೇಡ್ಸ್‌ಮೆನ್ | 17 | 6 | 11 |
| 123) | ಸೆಮಿ ಸ್ಕಿಲ್ಡ್ ಆರ್ಟಿಸಾನ್ | 40 | 33 | 7 |
| 124) | ಆರ್ಥೋ ಟೆಕ್ನೀಷಿಯನ್‌ಗಳು | 2 | 1 | 1 |
| 125) | ಡಯಾಲಿಸಿಸ್ ಥೆರಪಿಸ್ಟ್‌ಗಳು | 2 | - | 2 |
| 126) | ಜೂನಿಯರ್ ಮೆಕಾನಿಕ್‌ಗಳು | 10 | 5 | 5 |
| 127) | ಎಲೆಕ್ಟ್ರೀಷಿಯನ್ (ಟ್ರಾನ್ಸ್‌ಪೋರ್ಟ್) | 8 | 8 | - |
| 128) | ಪಾರ್ಟ್ಸ್‌ಮನ್ | 2 | - | 2 |
| 129) | ಡ್ರೈವರ್ ಕಮ್ ಮೆಕ್ಯಾನಿಕ್‌ಗಳು | 2 | - | 2 |
| 130) | ಕ್ಲೀನರ್‌ಗಳು | 145 | 123 | 22 |
| 131) | ಲೇಡಿಹೌಸ್ ಕೀಪರ್ಸ್‌ಗಳು | 17 | 12 | 5 |
| 132) | ಕಛೇರಿ ಅಧೀಕ್ಷಕರುಗಳು | 293 | 231 | 62 |

| | | | | |
|---|---|---|---|---|
| 133) | ಶೀಘ್ರಲಿಪಿಗಾರರುಗಳು | 118 | 103 | 15 |
| 134) | ಕಿರಿಯ ಶೀಘ್ರಲಿಪಿಗಾರರುಗಳು | 79 | 60 | 19 |
| 135) | ಪ್ರಥಮ ದರ್ಜೆ ಸಹಾಯಕರುಗಳು | 1918 | 1398 | 520 |
| 136) | ದ್ವಿತೀಯ ದರ್ಜೆ ಸಹಾಯಕರುಗಳು | 1363 | 1233 | 130 |
| 137) | ಬೆರಳಚ್ಚುಗಾರರು | 308 | 308 | - |
| 138) | ಬೆರಳಚ್ಚುಗಾರರು ಹಾಗೂ ಸಹಾಯಕರು | 314 | 173 | 141 |
| 139) | ಹಿರಿಯ ಬೆರಳಚ್ಚುಗಾರರು | 49 | 47 | 2 |
| 140) | ಹಿರಿಯ ಗ್ರಂಥಪಾಲಕರುಗಳು | 6 | 5 | 1 |
| 141) | ಗ್ರಂಥಪಾಲಕರು, ದರ್ಜೆ-1 | 3 | 2 | 1 |
| 142) | ಗ್ರಂಥಪಾಲಕರು, ದರ್ಜೆ-2 | 5 | 4 | 1 |
| 143) | ಗ್ರಂಥಪಾಲಕ ಸಹಾಯಕರುಗಳು | 3 | 2 | 1 |
| 144) | ಶುಶ್ರೂಷಾಧೀಕ್ಷಕರು ದರ್ಜೆ-1 (ಸಾ ಅ) | 71 | 67 | 4 |
| 145) | ಶುಶ್ರೂಷಾಧೀಕ್ಷಕರು ದರ್ಜೆ-2 (ಸಾ ಅ) | 51 | 47 | 4 |
| 146) | ಮಹಿಳಾ ಸಂದರ್ಶಕಿಯರುಗಳು | 1219 | 1099 | 120 |
| 147) | ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರುಗಳು | 9137 | 8827 | 310 |
| 148) | ಜಿಲ್ಲಾ ಆರೋಗ್ಯ ಶಿಕ್ಷಣಾ ಅಧಿಕಾರಿಗಳು | 20 | 19 | 1 |
| 149) | ಆರೋಗ್ಯ ಶಿಕ್ಷಣಾಧಿಕಾರಿಗಳು : ಆರೋಗ್ಯ ಶಿಕ್ಷಣಾ ಬೋಧಕರು : ಸಮಾಜ ವಿಜ್ಞಾನ ಬೋಧಕರು : ಸೋಷಿಯಲ್ ಸೈಂಟಿಸ್ಟ್ | 12 | 5 | 7 |
| 150) | ಉಪ ಆರೋಗ್ಯ ಶಿಕ್ಷಣಾಧಿಕಾರಿಗಳು | 84 | 73 | 11 |
| 151) | ಬ್ಲಾಕ್ ಮಟ್ಟದ ಆರೋಗ್ಯ ಶಿಕ್ಷಣಾಧಿಕಾರಿಗಳು | 726 | 284 | 442 |
| 152) | ಪ್ರೊಜೆಕ್ಷನಿಸ್ಟ್‌ಗಳು | 39 | 37 | 2 |
| 153) | ಉಪನ್ಯಾಸಕರು, ಆರೋಗ್ಯ ಶಿಕ್ಷಣಾ ಮತ್ತು ಕುಟುಂಬ ಕಲ್ಯಾಣಾ | 4 | 1 | 3 |
| 154) | ಸಹಾಯಕ ಸಂಪಾದಕರುಗಳು | 2 | 2 | - |

| | | | | |
|---|---|---|---|---|
| 155) | ಸಂಪಾದಕರು | 1 | - | 1 |
| 156) | ಕ್ಷೇತ್ರ ಪ್ರಚಾರ ಅಧಿಕಾರಿ | 1 | 1 | - |
| 157) | ಜನಸಂಖ್ಯಾ ತಜ್ಞರು | 1 | 1 | - |
| 158) | ಉಪಸಾರಿಗೆ ಅಧಿಕಾರಿ | 1 | 1 | - |
| 159) | ಉಪ ನಿರ್ದೇಶಕರು (ವಾರ್ತೆ) | 1 | 1 | - |
| 160) | ಹಿರಿಯ ಸಹಾಯಕ ನಿರ್ದೇಶಕರು (ಶುಶ್ರೂಷ) | 1 | 1 | - |
| 161) | ವಾಹನ ಆಡಳಿತ ನಿಯಂತ್ರಣಾಧಿಕಾರಿ | 1 | 1 | - |
| 162) | ವರ್ಕ್ಸ್ ಮ್ಯಾನೇಜರ್‌ಗಳು | 1 | 1 | - |
| 163) | ಅಂಕಿ ಅಂಶಗಳ ಅಧಿಕಾರಿಗಳು | 1 | 1 | - |
| 164) | ಸಾರ್ವಜನಿಕ ಆರೋಗ್ಯ ಶುಶ್ರೂಷ ಶಿಕ್ಷಕರು | 4 | 4 | - |
| 165) | ಕಾರ್ಯಕ್ರಮದ ಸಹಾಯಕ | 1 | 1 | - |
| 166) | ತಾಂತ್ರಿಕ ಸಹಾಯಕ/ಕಿರಿಯ ಇಂಜಿನಿಯರ್ | 2 | 2 | - |
| 167) | ಸಹಾಯಕ ನಿರ್ದೇಶಕರು (ಮುದ್ರಣ) | 1 | - | 1 |
| 168) | ಪರಿವೀಕ್ಷಕರು (ಮುದ್ರಣ) | 1 | 1 | - |
| 169) | ಸಹಾಯಕ ಅಂಕಿ ಅಂಶಗಳ ಅಧಿಕಾರಿ | 1 | - | 1 |
| 170) | ಅಂಕಿ ಅಂಶಗಳ ಅಧಿಕಾರಿ | 3 | 3 | - |
| 171) | ಹಿರಿಯ ಪರಿವೀಕ್ಷಕರು : ಸ್ಪೀವರ್ಡ್ (ಕುಷ್ಠರೋಗ) | 1 | 1 | - |
| 172) | ಮುಖ್ಯ ತಂತ್ರಜ್ಞರುಗಳು | 1 | 1 | - |
| 173) | ಛಾಯಾಗ್ರಾಹಕರು | 1 | 1 | - |
| 174) | ಎಲೆಕ್ಟ್ರಿಕಲ್ ಸೂಪರ್‌ವೈಸರ್ | 1 | - | 1 |
| 175) | ಆರ್ಟಿಸ್ಟ್ ಕಮ್ ರಿಟ್ರೇಟರ್ | 1 | 1 | - |
| 176) | ಸಹಾಯಕ ಅಂಕಿ ಅಂಶಗಳ ಅಧಿಕಾರಿಗಳು | 1 | 1 | - |
| 177) | ಸೀನಿಯರ್ ಎಲೆಕ್ಟ್ರೀಷಿಯನ್ | 1 | 1 | - |
| 178) | ಸೀನಿಯರ್ ಕಂಪೋಜಿಟರ್ | 1 | 1 | - |

| | | | |
|---|---|---|---|
| 179) ಹಿರಿಯ ತಾಂತ್ರಿಕ ಸಹಾಯಕ | 1 | 1 | - |
| 180) ಪ್ರೋಸೆಸ್ ಅಪರೇಟರ್ | 1 | - | 1 |
| 181) ಆರ್ಥೋಟೀವ್ ಟೆಕ್ನೀಷಿಯನ್ ಗ್ರೇಡ್-2 | 2 | 2 | - |
| 182) ಆಫ್‌ಸೆಟ್ ಪ್ಲೇಟ್‌ಮೇಕರ್ | 1 | 1 | - |
| 183) ಆಫ್‌ಸೆಟ್ ಪ್ರಿಂಟರ್‌ಗಳು | 1 | 1 | - |
| 184) ಆಫ್‌ಸೆಟ್ ಸಹಾಯಕ ಪ್ರಿಂಟರ್‌ಗಳು | 4 | 4 | - |
| 185) ಸೀನಿಯರ್ ಆಫ್‌ಸೆಟ್ ಪ್ರಿಂಟರ್‌ಗಳು | 1 | 1 | - |
| 186) ಅಸಿಸ್ಟೆಂಟ್ ಪ್ರೋಸೆಸ್ ಅಪರೇಟರ್ | 1 | 1 | - |
| 187) ಸೀನಿಯರ್ ಪ್ರೂಫ್ ಎಕ್ಸಾಮಿನರ್‌ಗಳು | 1 | 1 | - |
| 188) ಜೂನಿಯರ್ ಪ್ರೂಫ್ ಎಕ್ಸಾಮಿನರ್‌ಗಳು | 2 | 2 | - |
| 189) ಕಾಂಪೋಸಿಟರ್ | 1 | 1 | - |
| 190) ಜೂನಿಯರ್ ಕಾಂಪೋಸಿಟರ್‌ಗಳು | 3 | 2 | 1 |
| 191) ಸೀನಿಯರ್ ಬೈಂಡರ್‌ಗಳು | 1 | 1 | - |
| 192) ಮಿಷನ್ ಬೈಂಡರ್ | 1 | 1 | - |
| 193) ನೀಡ್ಲ್ ವರ್ಕ್ ಟೀಚರ್ | 9 | 8 | 1 |
| 194) ಲೂಮ್ ಮೆಕ್ಯಾನಿಕ್ | 1 | 1 | - |
| 195) ಬೈಂಡರ್‌ಗಳು | 2 | 2 | - |
| 196) ಗ್ರೂಪ್-ಡಿ ಜವಾನರುಗಳು | 15438 | 12852 | 2586 |
| ಒಟ್ಟು ಮೊತ್ತ | 56479 | 48029 | 8450 |

ಕರ್ನಾಟಕ ಸರ್ಕಾರ

# ವಾರ್ಷಿಕ ವರದಿ

# 1993-1994

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆ

# ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ 1993-94ನೇ ಸಾಲಿನ ವಾರ್ಷಿಕ ವರದಿ.

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯು ಆಯುರ್ವೇದ, ಯುನಾನಿ, ಸಿದ್ದ, ಪ್ರಕೃತಿ ಚಿಕಿತ್ಸೆ ಯೋಗ ಮತ್ತು ಹೋಮಿಯೋಪತಿ ಪದ್ಧತಿಗಳ ಮೂಲಕ ಗ್ರಾಮಾಂತರ ಪ್ರದೇಶಗಳ ಹಾಗೂ ನಗರಗಳ ನಾಗರೀಕರಿಗೆ ಆರೋಗ್ಯ ಸೇವೆಯನ್ನು ಒದಗಿಸಲು ಹಾಗೂ ಈ ಪದ್ಧತಿಗಳಲ್ಲಿ ವೈದ್ಯಕೀಯ ಶಿಕ್ಷಣವನ್ನು ನೀಡಲು ಆಯುರ್ವೇದ ಮತ್ತು ಯುನಾನಿ ಔಷಧಿಗಳ ತಯಾರಿಕೆಯ ಮೇಲೆ ನಿಯಂತ್ರಣ ಹೊಂದಲು ಸ್ಥಾಪಿಸಲ್ಪಟ್ಟಿತು. ಹಾಗೂ ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ವೈದ್ಯಕೀಯ ವೃತ್ತಿಯನ್ನು ನಡೆಸಲು ಈ ಇಲಾಖೆಯು ಕ್ರಮಬದ್ಧಗೊಳಿಸುತ್ತದೆ.

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ ಮುಖ್ಯಸ್ಥರಾದ ನಿರ್ದೇಶಕರಿಗೆ ಈ ಕೆಳಕಂಡ ಅಧಿಕಾರಿಗಳು ನಿರ್ದೇಶನಾಲಯದಲ್ಲಿ ಹಾಗೂ ವಿಭಾಗೀಯ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.

1. ಉಪ ನಿರ್ದೇಶಕರು (ಆಯುರ್ವೇದ)
2. ಉಪ ನಿರ್ದೇಶಕರು (ಯುನಾನಿ)
3. ಆಡಳಿತಾಧಿಕಾರಿಗಳು
4. ಲೆಕ್ಕಾಧಿಕಾರಿಗಳು
5. ವೈದ್ಯಾಧಿಕಾರಿ ದರ್ಜೆ-1 (ಪ್ರಕೃತಿಚಿಕಿತ್ಸೆ ಮತ್ತು ಯೋಗ)
6. ಉಪ ನಿರ್ದೇಶಕರು (ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ವಿಭಾಗೀಯ ಕಛೇರಿ, ಗುಲ್ಬರ್ಗಾ)

ಈ ಇಲಾಖೆಗೆ ಯೋಜನೆ, ಯೋಜನೇತರ ಹಾಗೂ ಕೇಂದ್ರ ಪುರಸ್ಕೃತ ಯೋಜನೆಗಳಲ್ಲಿ 1992-93ನೇ ಮತ್ತು 1993-94ನೇ ಆರ್ಥಿಕ ವರ್ಷಗಳಲ್ಲಿ ನೀಡಿದ ಆಯವ್ಯಯವು ಈ ಕೆಳಕಂತಿರುತ್ತದೆ.

| | 1992-93 | | | | 1993-94 | | | |
|---|---|---|---|---|---|---|---|---|
| | ರಾಜ್ಯಮಟ್ಟ | | ಜಿಲ್ಲಾಮಟ್ಟ | | ರಾಜ್ಯಮಟ್ಟ | | ಜಿಲ್ಲಾಮಟ್ಟ | |
| | ಆಯ ವ್ಯಯ | ವೆಚ್ಚ | ಆಯ ವ್ಯಯ | ವೆಚ್ಚ | ಆಯ ವ್ಯಯ | ವೆಚ್ಚ | ಆಯ ವ್ಯಯ | ವೆಚ್ಚ |
| 1. ಯೋಜನೇತರ | 650.93 | 589.48 | 473.30 | 473.30 | 748.45 | 653.05 | 520.47 | 520.47 |
| 2. ಯೋಜನೆ | 65.00 | 60.70 | 193.00 | 48.06 | 78.00 | 55.97 | 247.00 | 133.00 |
| 3. ಕೇಂದ್ರ ಪುರಸ್ಕೃತ | 6.00 | — | — | — | 6.00 | 3.62 | — | — |
| ಒಟ್ಟು | 721.93 | 650.18 | 666.30 | 521.36 | 832.45 | 712.64 | 767.47 | 653.47 |

## 1993-94ನೇ ಸಾಲಿನ ಸಾಧನೆಗಳು

1. 26 ಸರ್ಕಾರಿ ಆಯುರ್ವೇದ, 2 ಯುನಾನಿ ಔಷಧಾಲಯಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ತೆರೆಯಲು ಮಂಜೂರಾತಿಯನ್ನು ನೀಡಲಾಗಿದೆ.
2. ಬೆಂಗಳೂರಿನಲ್ಲಿ 10 ಹಾಸಿಗೆಗಳ ಸರ್ಕಾರಿ ಪ್ರಕೃತಿ ಚಿಕಿತ್ಸೆ ಆಸ್ಪತ್ರೆಯನ್ನು ತೆರೆಯಲು ಮಂಜೂರಾತಿ ನೀಡಿದೆ.
3. ಚಿತ್ರದುರ್ಗ ಜಿಲ್ಲೆ ಹಿರಿಯೂರಿನಲ್ಲಿ ಮತ್ತು ಬಳ್ಳಾರಿ ಜಿಲ್ಲೆ ಹೊಸಪೇಟೆಯಲ್ಲಿ 10 ಹಾಸಿಗೆಗಳ ಸರ್ಕಾರಿ ಆಯುರ್ವೇದ ಆಸ್ಪತ್ರೆಗಳನ್ನು ತೆರೆಯಲು ಮಂಜೂರಾತಿ ನೀಡಿದೆ.
4. ಧಾರವಾಡ ಜಿಲ್ಲೆ ರಾಣಿಬೆನ್ನೂರು ಮತ್ತು ಕೋಲಾರ ಜಿಲ್ಲೆ ಚಿಂತಾಮಣಿಯಲ್ಲಿ 6 ಹಾಸಿಗೆಗಳ ಸರ್ಕಾರಿ ಆಯುರ್ವೇದ ಆಸ್ಪತ್ರೆಗಳನ್ನು ತೆರೆಯಲು ಮಂಜೂರಾತಿ ನೀಡಿದೆ.
5. ಬಳ್ಳಾರಿ ಜಿಲ್ಲೆ ಹರಪ್ಪನಹಳ್ಳಿಯ ಸರ್ಕಾರಿ ಆಯುರ್ವೇದ ಔಷಧಾಲಯವನ್ನು 6 ಹಾಸಿಗೆಗಳ ಸರ್ಕಾರಿ ಆಯುರ್ವೇದ ಆಸ್ಪತ್ರೆಯನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ.
6. ತುಮಕೂರಿನಲ್ಲಿ 25 ಹಾಸಿಗೆಗಳ ಜಿಲ್ಲಾ ಸರ್ಕಾರಿ ಆಯುರ್ವೇದ ಆಸ್ಪತ್ರೆ ಮತ್ತು ಯುನಾನಿ ಆಸ್ಪತ್ರೆಯನ್ನು ತೆರೆಯಲು ಮಂಜೂರಾತಿ ನೀಡಿದೆ.

## ವೈದ್ಯಕೀಯ ನೆರವು

ರಾಜ್ಯದಲ್ಲಿ ಒಟ್ಟು 65 ಆಸ್ಪತ್ರೆಗಳು ಹಾಗೂ 500 ಔಷಧಾಲಯಗಳು ಕಾರ್ಯನಿರ್ವಹಿಸುತ್ತಿವೆ. ಪ್ರತಿ ಪದ್ಧತಿಯ ವಿವರಗಳು ಈ ಕೆಳಕಂಡಂತಿವೆ.

| ಕ್ರ. ಸಂ. ಪದ್ಧತಿಗಳು | ಆಸ್ಪತ್ರೆಗಳು ಆಸ್ಪತ್ರೆಗಳ ಸಂಖ್ಯೆ | ಹಾಸಿಗೆಗಳ ಸಂಖ್ಯೆ | ಔಷಧಾಲಯಗಳು |
|---|---|---|---|
| 1. ಆಯುರ್ವೇದ | 49 | 930 | 435 |
| 2. ಯುನಾನಿ | 8 | 147 | 41 |
| 3. ಹೋಮಿಯೋಪತಿ | 2 | 50 | 19 |
| 4. ಪ್ರಕೃತಿಚಿಕಿತ್ಸೆ | 2 | 16 | 5 |
| 5. ಯೋಗ | 3 | 15 | Ë |
| 6. ಸಿದ್ಧ | 1 | 10 | Ë |
| **ಒಟ್ಟು** | **65** | **1168** | **500** |

## ಆಯುರ್ವೇದ

11 ಆಯುರ್ವೇದ ಆಸ್ಪತ್ರೆಗಳು ಜಿಲ್ಲಾಮಟ್ಟದಲ್ಲಿ ನಡೆಯುತ್ತಿವೆ. ಅವುಗಳಲ್ಲಿ ಈ ಕೆಳಕಂಡ 3 ಆಸ್ಪತ್ರೆಗಳು ಭೋದನಾ ಆಸ್ಪತ್ರೆಗಳಾಗಿ ಕಾರ್ಯನಿರ್ವಹಿಸುತ್ತವೆ.

| | | ಹಾಸಿಗೆಗಳ ಸಂಖ್ಯೆ |
|---|---|---|
| 1. | ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯ ಸಂಸ್ಥೆ ಬೆಂಗಳೂರು | 225 |
| 2. | ಸರ್ಕಾರಿ ಭಾರತೀಯ ವೈದ್ಯ ಕಾಲೇಜು ಮತ್ತು ಆಸ್ಪತ್ರೆ ಮೈಸೂರು | 140 |
| 3. | ಸರ್ಕಾರಿ ತಾರಾನಾಥ ಆಯುರ್ವೇದ ಆಸ್ಪತ್ರೆ ಬಳ್ಳಾರಿ | 70 |

ಇತರೆ ಜಿಲ್ಲಾ : ತಾಲ್ಲೂಕು ಮಟ್ಟದಲ್ಲಿರುವ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿರುವ ಆಸ್ಪತ್ರೆಗಳ ಸ್ಥಳ ಹಾಗೂ ಹಾಸಿಗೆಗಳ ಸಂಖ್ಯೆ ಈ ಕೆಳಕಂಡಂತಿದೆ. ಗ್ರಾಮಾಂತರ ಪ್ರದೇಶಗಳ ಆಸ್ಪತ್ರೆಗಳು ಹಾಲಿ ಜಿಲ್ಲಾ ಪರಿಷತ್ತುಗಳ ಕಾರ್ಯವ್ಯಾಪ್ತಿಯಲ್ಲಿವೆ.

| | | ನಗರ ಪ್ರದೇಶ |
|---|---|---|
| 1. | ಬಿಜಾಪುರ | 50 |
| 2. | ಶಿವಮೊಗ್ಗ | 40 |
| 3. | ಹುಬ್ಬಳ್ಳಿ | 25 |
| 4. | ತುಮಕೂರು | 25 |
| 5. | ಕಾರವಾರ | 10 |
| 6. | ಮಂಡ್ಯ | 25 |
| 7. | ಹಾಸನ | 25 |
| 8. | ಮಡಿಕೇರಿ | 10 |
| 9. | ತುಮಕೂರು | 15 |

**ತಾಲ್ಲೂಕು ಮಟ್ಟದ ಆಸ್ಪತ್ರೆಗಳು.**

| | | |
|---|---|---|
| 1. | ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ | 6 |
| 2. | ಚಿತ್ತಾಪುರ ಗುಲ್ಬರ್ಗಾ | 10 |
| 3. | ಹೊಳೇನರಸೀಪುರ, ಹಾಸನ | 10 |
| 4. | ಸಂಡೂರು, ಬಳ್ಳಾರಿ | 6 |
| 5. | ಮಾಗಡಿ ಬೆಂಗಳೂರು ಗ್ರಾ. | 10 |
| 6. | ಕನಕಪುರ, ಬೆಂಗಳೂರು ಗ್ರಾ | 6 |
| 7. | ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾ | 6 |
| 8. | ಶ್ರೀನಿವಾಸಪುರ ಕೋಲಾರ ಜಿಲ್ಲೆ | 10 |
| 9. | ತಿಪಟೂರು, ತುಮಕೂರು | 10 |
| 10. | ಚಾಮರಾಜನಗರ, ಮೈಸೂರು | 10 |
| 11. | ಕಡೂರು, ಚಿಕ್ಕಮಗಳೂರು | 10 |
| 12. | ಮಳವಳ್ಳಿ, ಮಂಡ್ಯ | 6 |
| 13. | ವಿರಾಜಪೇಟೆ,ಕೊಡಗು | 10 |
| 14. | ಬೈಲಹೊಂಗಲ, ಬೆಳಗಾಂ | 6 |
| 15. | ಅಥಣಿ, ಬೆಳಗಾಂ | 6 |
| 16. | ಬೆಟಗೇರಿ ಧಾರವಾಡ | 10 |

| | | |
|---|---|---|
| 17. | ಜಮಖಂಡಿ, ಬಿಜಾಪುರ | 10 |
| 18. | ಬಾಗಲಕೋಟೆ, ಬಿಜಾಪುರ | 10 |
| 19. | ಬೀಳಗಿ, ಬಿಜಾಪುರ | 6 |
| 20. | ಶಿರಸಿ, ಉತ್ತರಕನ್ನಡ | 10 |
| 21. | ಅಫಜಲ್ಪುರ, ಗುಲ್ಬರ್ಗಾ | 10 |
| 22. | ಗಂಗಾವತಿ, ರಾಯಚೂರು | 10 |
| 23. | ಹಿರಿಯೂರು, ಚಿತ್ರದುರ್ಗ | 10 |
| 24. | ಚಿಂತಾಮಣಿ, ಕೋಲಾರಜಿಲ್ಲೆ | 6 |
| 25. | ರಾಣೆಬೆನ್ನೂರು, ಧಾರವಾಡ | 6 |
| 26. | ಹರಪ್ಪನಹಳ್ಳಿ, ಬಳ್ಳಾರಿ | 6 |
| 27. | ಹೊಸಪೇಟೆ, ಬಳ್ಳಾರಿ | 10 |

## ಗ್ರಾಮಾಂತರ ಪ್ರದೇಶ

| | | |
|---|---|---|
| 1. | ಹೂಲಿ, ಬೆಳಗಾಂ ಜಿಲ್ಲೆ | 10 |
| 2. | ಬೆಳಗುಂಬ, ಹಾಸನ | 6 |
| 3. | ಯರದಕೆರೆ, ಚಿಕ್ಕಮಂಗಳೂರು | 10 |
| 4. | ಐಮಂಗಲ, ಚಿತ್ರದುರ್ಗ | 6 |
| 5. | ಮಂಚಲದೊರೆ ತುಮಕೂರು | 6 |
| 6. | ಕಮಲಾಪುರ, ಗುಲ್ಬರ್ಗಾ | 6 |
| 7. | ಹದಿನಾರು, ಮೈಸೂರು | 6 |
| 8. | ಗಿಣಿಗೇರಾ, ರಾಯಚೂರು | 6 |
| 9. | ಮಾರೇನಹಳ್ಳಿ, ಬೆಂಗಳೂರು.ನ. | 6 |
| 10. | ಕಟ್ಟಾಯ, ಹಾಸನ | 6 |
| 11. | ತೋಕೂರು ಜೊಕಟ್ಟೆ, ದ.ಕ. | 6 |

ರಾಜ್ಯಾದ್ಯಂತ ಒಟ್ಟು 435 ಸರ್ಕಾರಿ ಆಯುರ್ವೇದ ಔಷಧಾಲಯಗಳು ಕಾರ್ಯನಿರ್ವಹಿಸುತ್ತಿದೆ.

## ಯುನಾನಿ

ರಾಜ್ಯದಲ್ಲಿ ಒಟ್ಟು 7 ಯುನಾನಿ ಆಸ್ಪತ್ರೆಗಳು ಹಾಗೂ 41 ಯುನಾನಿ ಔಷಧಾಲಯಗಳು ಇವೆ. ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆಯಲ್ಲಿ 75 ಹಾಸಿಗೆಗಳಿದ್ದು ಇದು ಬೆಂಗಳೂರಿನ ಸರ್ಕಾರಿ ಯುನಾನಿ ವೈದ್ಯಕೀಯ ಕಾಲೇಜಿನ ಭೋಧಕ ಆಸ್ಪತ್ರೆಯಾಗಿ ಕೆಲಸ ನಿರ್ವಹಿಸುತ್ತಿದೆ. ಮೈಸೂರಿನ ಸರ್ಕಾರಿ ಭಾರತೀಯ ವೈದ್ಯಕೀಯ ಆಸ್ಪತ್ರೆಯಲ್ಲಿ 20 ಹಾಸಿಗೆಗಳ ಮತ್ತು ರಾಯಚೂರು ಹಾಗೂ ರಾಮನಗರಗಳಲ್ಲಿ ಕ್ರಮವಾಗಿ 10, ತಿಮ್ಮಾಪುರ, ರಂಗಂಪೇಟೆ, ಗುಲ್ಬರ್ಗಾ ಜಿಲ್ಲೆ ಹಾಗೂ ರಾಜಲ್ಬಂಡಾ, ರಾಯಚೂರು ಜಿಲ್ಲೆ, ಇಲ್ಲಿ ಕ್ರಮವಾಗಿ 6 ಹಾಸಿಗೆಗಳ ಮತ್ತು ಬಿಜಾಪುರದಲ್ಲಿ 10 ಹಾಸಿಗೆಗಳ, ತುಮಕೂರಿನಲ್ಲಿ 10 ಹಾಸಿಗೆಗಳ ಆಸ್ಪತ್ರೆಗಳಿದ್ದು ಒಳರೋಗಿಗಳಿಗೆ ಚಿಕಿತ್ಸಾ ಸೌಲಭ್ಯವನ್ನು ಕಲ್ಪಿಸಲಾಗಿದೆ.

ಕೇಂದ್ರ ಸರ್ಕಾರದಿಂದ ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯ ಸಂಸ್ಥೆಯಲ್ಲಿ ಯುನಾನಿ ಸಂಶೋಧನಾ ಕೇಂದ್ರವೊಂದು ಪ್ರಾರಂಭವಾಗಿರುತ್ತದೆ.

**ಹೋಮಿಯೋಪತಿ**

ಬೆಂಗಳೂರಿನ 40 ಹಾಸಿಗೆಗಳ ಒಂದು ಸರ್ಕಾರಿ ಹೋಮಿಯೋಪತಿ ಆಸ್ಪತ್ರೆ ಇದೆ. ಅಲ್ಲದೆ ಕೊಡಗು ಜಿಲ್ಲೆಯ ಸೋಮವಾರಪೇಟೆಯಲ್ಲಿ 10 ಹಾಸಿಗೆಗಳ ಒಂದು ಆಸ್ಪತ್ರೆಯು ಕಾರ್ಯ ನಿರ್ವಹಿಸುತ್ತಿದೆ. 19 ಹೋಮಿಯೋಪತಿ ಔಷಧಾಲಯಗಳು ಜಿಲ್ಲಾ ಪರಿಷತ್ತಿನ ಆಧೀನದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿವೆ.

**ಪ್ರಕೃತಿ ಚಿಕಿತ್ಸೆ**

ಬೆಂಗಳೂರಿನಲ್ಲಿ 10 ಹಾಸಿಗೆಗಳ ಸರ್ಕಾರಿ ಪ್ರಕೃತಿ ಚಿಕಿತ್ಸಾ, ಆಸ್ಪತ್ರೆ ಮತ್ತು ಮೈಸೂರಿನಲ್ಲಿ 6 ಹಾಸಿಗೆಗಳ ಒಂದು ಪ್ರಕೃತಿ ಚಿಕಿತ್ಸೆ ಆಸ್ಪತ್ರೆಯು ಕಾರ್ಯ ನಿರ್ವಹಿಸುತ್ತಿದೆ. ಅಲ್ಲದೆ 5 ಪ್ರಕೃತಿ ಚಿಕಿತ್ಸಾಲಯಗಳು ರಾಜ್ಯದಲ್ಲಿದ್ದು ಹಾಲಿ ಅವುಗಳು ಜಿಲ್ಲಾ ಪರಿಷತ್ತಿನ ಅಧೀನದಲ್ಲಿವೆ.

**ಸಿದ್ಧ**

ಸಿದ್ದ ಪದ್ಧತಿಯ 10 ಹಾಸಿಗೆಗಳ ಸೌಲಭ್ಯವನ್ನು ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆಯಲ್ಲಿ ಕಲ್ಪಿಸಲಾಗಿದೆ.

**ಯೋಗ**

ಯೋಗ ಪದ್ಧತಿಯಲ್ಲಿ ಒಳರೋಗಿಗಳಿಗೆ ಚಿಕಿತ್ಸೆ ನೀಡಲು ಅನುಕೂಲವಾಗುವಂತೆ ಶ್ರೀ ಯಚಾಮರಾಜೇಂದ್ರ ಭಾರತೀಯ ವೈದ್ಯ ಸಂಸ್ಥೆ, ಬೆಂಗಳೂರು, ಸರ್ಕಾರಿ ಭಾರತೀಯ ವೈದ್ಯ ಮಹಾ ವಿದ್ಯಾಲಯ ಮತ್ತು ಆಸ್ಪತ್ರೆ ಮೈಸೂರು ಹಾಗೂ ಬಳ್ಳಾರಿ ಆಸ್ಪತ್ರೆಗಳಲ್ಲಿ ಐದು ಹಾಸಿಗೆಗಳ ಸೌಲಭ್ಯವನ್ನು ಕಲ್ಪಿಸಿಲಾಗಿದೆ.

ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ ಮತ್ತು ಮೈಸೂರಿನಲ್ಲಿರುವ ಸರ್ಕಾರಿ ಭಾರತೀಯ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ ಮತ್ತು ತಾರಾನಾಥ ಕಾಲೇಜಿನ ಆಸ್ಪತ್ರೆ ಬಳ್ಳಾರಿಯಲ್ಲಿ ನಿಯತಕಾಲಿಕವಾಗಿ ಯೋಗಾ ಶಿಬಿರಗಳನ್ನು ಅತಿ ಬೊಜ್ಜು ರೋಗಿಗಳಿಗೆ ನಡೆಸಲಾಗುತ್ತಿದೆ.

**ಸಂಶೋಧನೆ**

ಸಂಶೋಧನಾ ವಿಭಾಗದಿಂದ ಮಧುಮೇಹ ಖಾಯಿಲೆಗೆ ಸಂಶೋಧನೆಯನ್ನು ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು ಇಲ್ಲಿ ನಡೆಸಲಾಗುತ್ತದೆ.

**ವೈದ್ಯಕೀಯ ಶಿಕ್ಷಣ**

1. **ಆಯುರ್ವೇದ (ಬಿಎಎಂಎಸ್ ಶಿಕ್ಷಣ)**

ರಾಜ್ಯದಲ್ಲಿ 3 ಸರ್ಕಾರಿ ಆಯುರ್ವೇದ ಕಾಲೇಜುಗಳಿದ್ದು ಮತ್ತು 19 ಕಾಲೇಜುಗಳು ಖಾಸಗಿ ಕಾಲೇಜುಗಳಿವೆ. ಅವುಗಳಲ್ಲಿ 5 ಕಾಲೇಜುಗಳು ಸರ್ಕಾರದ ಧನ ಸಹಾಯದ ಕಾಲೇಜುಗಳು. ಈ ಕಾಲೇಜುಗಳ ಹೆಸರು ಮತ್ತು ಅವುಗಳ ಪ್ರವೇಶಾವಕಾಶ ಈ ಕೆಳಕಂಡಂತಿರುತ್ತದೆ.

| | | |
|---|---|---|
| 1. | ಸರ್ಕಾರಿ ಭಾರತೀಯ ವೈದ್ಯಕೀಯ ಮಹಾ ವಿದ್ಯಾಲಯ, ಬೆಂಗಳೂರು. | 60 |
| 2. | ಸರ್ಕಾರಿ ಭಾರತೀಯ ವೈದ್ಯಕೀಯ ಮಹಾ ವಿದ್ಯಾಲಯ, ಮೈಸೂರು. | 50 |
| 3. | ತಾರಾನಾಥ ಆಯುರ್ವೇದ ಮಹಾ ವಿದ್ಯಾಲಯ ಬಳ್ಳಾರಿ. | 25 |
| 4. | ಧರ್ಮಸ್ಥಳ ಮಂಜುನಾಥೇಶ್ವರ ಆಯುರ್ವೇದ ಮಹಾ ವಿದ್ಯಾಲಯ ಉಡುಪಿ. | 60 |
| 5. | ಆಯುರ್ವೇದ ಮಹಾ ವಿದ್ಯಾಲಯ ಹುಬ್ಬಳ್ಳಿ | 50 |
| 6. | ಆಯುರ್ವೇದ ಮಹಾ ವಿದ್ಯಾಲಯ, ಬಿಜಾಪುರ | 50 |
| 7. | ಡಿ.ಜಿ. ಮೇಲ್ಮಳಗಿ ಮಹಾ ವಿದ್ಯಾಲಯ, ಗದಗ | 50 |
| 8. | ಬಿ.ಎಂ.ಕೆ. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಬೆಳಗಾಂ | 50 |
| 9. | ಶ್ರೀ ಎ.ಎಲ್.ಎನ್.ರಾವ್. ಆಯುರ್ವೇದ ಶಿಕ್ಷಣ ವೈದ್ಯಕೀಯ ಕಾಲೇಜು ಕೊಪ್ಪ ಚಿ.ಮಗಳೂರು | 40 |
| 10. | ಶ್ರೀ ಚಿದಂಬರ್ ಶಿಕ್ಷಣ ಸಂಸ್ಥೆ ಆಯುರ್ವೇದ ವೈದ್ಯಕೀಯ ಕಾಲೇಜು, ಬೀದರ್ | 20 |
| 11. | ಶ್ರೀ ತಗ್ಗಿನಮಠ ಕಲಾ ಮತ್ತು ವಿದ್ಯಾಸಂಸ್ಥೆ ಆಯುರ್ವೇದ ವೈದ್ಯಕೀಯ ಕಾಲೇಜು, ಹೊಸಪೇಟೆ. | 30 |
| 12. | ಶ್ರೀ ಸಿದ್ದೇಶ್ವರ ವಿದ್ಯಾಭ್ಯಾಸ ಸಮಿತಿ ಆಯುರ್ವೇದ ವೈದ್ಯಕೀಯ ಕಾಲೇಜು ಮುಂಡರ್ಗಿ, ಧಾರವಾಡ ಜಿಲ್ಲೆ | 25 |
| 13. | ಶ್ರೀ ವಿಜಯ ಮಹಂತೇಶ ವಿದ್ಯಾವರ್ಧಕ ಸಂಸ್ಥೆ ಆಯುರ್ವೇದಿಕ್ ವೈದ್ಯಕೀಯ ಕಾಲೇಜು ಇಲಕಲ್ ಬಿಜಾಪುರ ಜಿಲ್ಲೆ | 25 |
| 14. | ಆಶ್ವಿನಿ ವಿದ್ಯಾಸಂಸ್ಥೆಯ ಆಯುರ್ವೇದಿಕ್ ಮೆಡಿಕಲ್ ಕಾಲೇಜು ದಾವಣಗೆರೆ, ಚಿತ್ರದುರ್ಗ | 50 |
| 15. | ಶ್ರೀ ತೆಗ್ಗಿನಮಠದ ಕಲಾ ಮತ್ತು ವಿದ್ಯಾ ಸಂಸ್ಥೆಯ ಆಯುರ್ವೇದ ವೈದ್ಯಕೀಯ ಕಾಲೋಜು ಭದ್ರಾವತಿ ' | 40 |
| 16. | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಆಯುರ್ವೇದ ವೈದ್ಯಕೀಯ ಕಾಲೇಜು ಹಾಸನ. | 50 |
| 17. | ಜಗದ್ಗುರು * ವಿದ್ಯಾಪೀಠ ಗದಗ್ ಎಸ್.ಎಸ್. ಆಯುರ್ವೇದ ವೈದ್ಯಕೀಯ ಕಾಲೇಜು ಹಾವೇರಿ | 25 |
| 18. | ಲಯನ್ಸ್ ಸ್ವಾಮಿ ವಿವೇಕಾನಂದ ವಿದ್ಯಾಸಂಸ್ಥೆ ಆಯುರ್ವೇದ ವೈದ್ಯ ಕಾಲೇಜು ಗಜೇಂದ್ರಗಢ | 25 |
| 19. | ಬಿ.ಎಸ್.ಎಂ. ರೂರಲ್ ಆಯುರ್ವೇದ ವೈದ್ಯಕೀಯ ಕಾಲೇಜು ಬಿಜಾಪುರ. | 25 |

| | | |
|---|---|---|
| 20. | ಶ್ರೀ ಕಾಳಿದಾಸ ವಿದ್ಯಾ ಸಂಸ್ಥೆ ಆಯುರ್ವೇದ ಕಾಲೇಜು, ಬಾದಾಮಿ. | 25 |
| 21. | ರಾಜೀವ್‌ಗಾಂಧಿ ವಿದ್ಯಾಸಂಸ್ಥೆ ಆಯುರ್ವೇದ ಕಾಲೇಜು ರೋಣ ಧಾರವಾಡ ಜಿಲ್ಲೆ | 25 |
| 22. | ಶ್ರೀ ಮಹಾಗಣಪತಿ ವಿದ್ಯಾಸಂಸ್ಥೆ ಆಯುರ್ವೇದ ವೈದ್ಯಕೀಯ ಕಾಲೇಜು, ಧಾರವಾಡ | 40 |

**ಆಯುರ್ವೇದದಲ್ಲಿ ಸ್ನಾತಕೋತ್ತರ ಪದವಿಗಳನ್ನು ಈ ಕೆಳಕಂಡ ವಿಷಯಗಳಲ್ಲಿ ನಡೆಸಲಾಗುತ್ತಿದೆ.**

| | | |
|---|---|---|
| 1. | ಸರ್ಕಾರಿ ಭಾರತೀಯ ವೈದ್ಯಕೀಯ ಮಹಾ ವಿದ್ಯಾಲಯ, ಮೈಸೂರು. | ಕಾಯಚಿಕಿತ್ಸಾ |
| 2. | ಸರ್ಕಾರಿ ಭಾರತೀಯ ವೈದ್ಯಕೀಯ ಮಹಾ ವಿದ್ಯಾಲಯ ಬೆಂಗಳೂರು | 1. ದ್ರವ್ಯಗುಣ<br>2. ಶಲ್ಯತಂತ್ರ<br>3. ಶಾಲಾಕ್ಯತಂತ್ರ |

ಪ್ರತಿ ವಿಭಾಗದಲ್ಲಿ 7 ಅಭ್ಯರ್ಥಿಗಳಿಗೆ ಪ್ರವೇಶಾವಕಾಶ ಇರುತ್ತದೆ.

## ಯುನಾನಿ : (ಬಿ.ಯು.ಎಂ.ಎಸ್.ಪದವಿ)

ಯುನಾನಿ ವೈದ್ಯಪದ್ಧತಿಯಲ್ಲಿ ವೈದ್ಯಕೀಯ ಶಿಕ್ಷಣ ನೀಡಲು 1975ನೇ ಸಾಲಿನಿಂದ ಬೆಂಗಳೂರಿನಲ್ಲಿ ಸರ್ಕಾರಿ ಯುನಾನಿ ವೈದ್ಯಕೀಯ ಕಾಲೇಜು ಕಾರ್ಯನಿರ್ವಹಿಸುತ್ತಿದೆ. ಈ ಕಾಲೇಜು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಂಯೋಜನೆ ಹೊಂದಿದ್ದು ಪ್ರವೇಶಾವಕಾಶ 50 ಇರುತ್ತದೆ.

## ಹೋಮಿಯೋಪತಿ (ಬಿ.ಹೆಚ್.ಎಂಎಸ್.ಪದವಿ)

ರಾಜ್ಯದಲ್ಲಿ 12 ಹೋಮಿಯೋಪತಿ ಕಾಲೇಜುಗಳಿವೆ. ಅವುಗಳಲ್ಲಿ ಬೆಂಗಳೂರಿನಲ್ಲಿ ಒಂದು ಕಾಲೇಜು ಸರ್ಕಾರಿ ಕಾಲೇಜು ಆಗಿವೆ. ಉಳಿದ 11 ಖಾಸಗಿ ಕಾಲೇಜುಗಳಾಗಿರುತ್ತವೆ. ಈ ಹೋಮಿಯೋಪತಿ ಮಹಾ ವಿದ್ಯಾಲಯಗಳ ವಿದ್ಯಾರ್ಥಿಗಳ ಸೇರ್ಪಡೆ ಈ ಕೆಳಕಂಡಂತಿರುತ್ತದೆ.

| | | |
|---|---|---|
| 1. | ಸರ್ಕಾರಿ ಹೋಮಿಯೋಪತಿ ಮಹಾವಿದ್ಯಾಲಯ ಬೆಂಗಳೂರು | 30 |
| 2. | ಎ.ಎಂ. ಶೇಖ್ ಹೋಮಿಯೋಪತಿ ಮೆಡಿಕಲ್ ಕಾಲೇಜು, ಬೆಳಗಾಂ. | 100 |
| 3. | ಭರತೇಶ್ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಬೆಳಗಾಂ. | 40 |
| 4. | ಮರಾಠ ಮಂಡಲ್ ಹೋಮಿ. ಮೆಡಿಕಲ್ ಕಾಲೇಜು, ಬೆಳಗಾಂ. | 40 |
| 5. | ಕರ್ನಾಟಕ ಹೋಮಿ. ವೈದ್ಯ ಕಾಲೇಜು, ಹುಬ್ಬಳ್ಳಿ | 40 |
| 6. | ಹೆಚ್.ಕೆ.ಇ. ಹೋಮಿಯೋಪತಿ ಮೆಡಿಕಲ್ ಕಾಲೇಜು ಗುಲ್ಬರ್ಗಾ. | 50 |
| 7. | ಮೌಲಾನಾ ಆಜಾದ್ ಹೋಮಿ.ಮೆಡಿಕಲ್ ಕಾಲೇಜು, ಹುಬ್ಬಳ್ಳಿ | 40 |
| 8. | ಪಾದರುಲ್ಲರ್ ಹೋಮಿಯೋಪತಿ ಮೆಡಿಕಲ್ ಕಾಲೇಜು, ಮಂಗಳೂರು | 50 |
| 9. | ಐ.ಇ.ಎ. ಹೋಮಿ. ವೈದ್ಯಕೀಯ ಕಾಲೇಜು, ಧಾರವಾಡ | 25 |

| | | |
|---|---|---|
| 10. | ಆದ್ಯ ಶ್ರೀ ನಿಜಲಿಂಗೇಶ್ವ ವಿದ್ಯಾ ಸಂಸ್ಥೆ, ಹೋಮಿಯೋಪತಿ ಮೆಡಿಕಲ್ ಕಾಲೇಜು, ಸಂಕೇಶ್ವರ, ಬೆಳಗಾಂ. | 25 |
| 11. | ಆಲ್ ಅಮೀನ್ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಬಿಜಾಪುರ. | 25 |
| 12. | ನ್ಯಾಷನಲ್ ಹೋಮಿಯೋಪತಿ ಮೆಡಿಕಲ್ ಕಾಲೇಜು, ಧಾಡವಾಡ. | 25 |

**ಪ್ರಕೃತಿ ಚಿಕಿತ್ಸೆ**

ಮೈಸೂರಿನಲ್ಲಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಕಾಲೇಜು ನಡೆಯುತ್ತಿದೆ. ಅಲ್ಲಿ ಆಯುರ್ವೇದ ಪದವೀಧರರಿಗೆ 2 ವರ್ಷದ ಡಿಪ್ಲೊಮೋ ಶಿಕ್ಷಣವನ್ನು ನೀಡಲಾಗುತ್ತಿದೆ. ಇವರ ಪ್ರವೇಶ ಸಂಖ್ಯೆ:12. ಶ್ರೀ ಧರ್ಮಸ್ಥಳದಲ್ಲಿ ಮಂಜುನಾಥೇಶ್ವರ ಪ್ರಕೃತಿ ಚಿಕಿತ್ಸೆ ಖಾಸಗಿ ಮಹಾವಿದ್ಯಾಲಯವು ಉಜಿರೆಯಲ್ಲಿದ್ದು ಅದರ ಪ್ರವೇಶ ಸಂಖ್ಯೆ 40 ಆಗಿರುತ್ತದೆ.

**ಔಷಧ ನಿಯಂತ್ರಣ**

ಇಲಾಖೆಯು ಔಷಧಿಗಳ ತಯಾರಿಕೆ ಮಾರಾಟ ಮುಂತಾದ ವಿಷಯಗಳಲ್ಲಿ 1976ನೇ ಡಿಸೆಂಬರ್‌ನಿಂದ ಡ್ರಗ್ಸ್ ಮತ್ತು ಕಾಸ್ಮೆಟಿಕ್ಸ್ ಅಧಿನಿಯಮ 1940ರ ಮತ್ತು ಅದರ ನಿಯಮಾವಳಿಗಳಡಿಯಲ್ಲಿ ನಿಯಂತ್ರಣವನ್ನು ಹೊಂದಿರುತ್ತದೆ.

ಆಯುರ್ವೇದ, ಯುನಾನಿ ಹಾಗೂ ಹೋಮಿಯೋಪತಿಯಲ್ಲಿ ಮಾರ್ಚ್ 1994ರವರೆಗೆ ಇರುವ ಲೈಸೆನ್ಸ್‌ದಾರರ ವಿವರಗಳು ಈ ಕೆಳಕಂಡಂತಿವೆ.

| ಪದ್ದತಿಗಳು. | ತಯಾರಿಕಾ ಲೈಸೆನ್ಸ್ ಸಂಖ್ಯೆ | ಮಾರಾಟ ಲೈಸೆನ್ಸ್ ಸಂಖ್ಯೆ. |
|---|---|---|
| 1) ಆಯುರ್ವೇದ. | 221 | — |
| 2) ಯುನಾನಿ | 11 | — |
| 3) ಹೋಮಿಯೋಪತಿ. | 12 | 140 |
| **ಒಟ್ಟು** | **244** | **140** |

**ಸರ್ಕಾರಿ ಕೇಂದ್ರೀಯ ಔಷಧಾಗಾರ ಬೆಂಗಳೂರು**

ಬೆಂಗಳೂರಿನ ಸರ್ಕಾರಿ ಕೇಂದ್ರಿಯ ಔಷಧಾಗಾರದಲ್ಲಿ ಆಯುರ್ವೇದ ಮತ್ತು ಯುನಾನಿ ಔಷಧಿಗಳನ್ನು ತಯಾರಿಸಿ ಅವುಗಳನ್ನು ರಾಜ್ಯದಲ್ಲಿರುವ ಎಲ್ಲಾ ಆಸ್ಪತ್ರೆಗಳು ಔಷಧಾಲಯಗಳು ಹಾಗೂ ಎಸ್.ಎಂ.ಪಿ. ಕೇಂದ್ರಗಳಿಗೆ ಬೇಡಿಕೆಗನುಗುಣವಾಗಿ ಸರಬರಾಜು ಮಾಡಲಾಗುತ್ತಿದೆ. ಈ ಇಲಾಖೆಯ ಔಷಧಾಲಯಗಳಿಗೆ ವಾರ್ಷಿಕ ರೂ. 12,000-00 ಮೌಲ್ಯದ ಔಷಧಿಗಳನ್ನು ಸರಬರಾಜು ಮಾಡಬೇಕಾಗಿದ್ದ ಅದರಲ್ಲಿ ಇಲ್ಲಿಂದ ಪ್ರತಿ ವರ್ಷವೂ ಪ್ರತಿ ಯುನಾನಿ: ಆಯುರ್ವೇದ ಔಷಧಾಲಯಗಳಿಗೆ ರೂ. 7,200-00 ಬೆಲೆಯ ಔಷಧಿಗಳನ್ನು ನಿಗಧಿತ ಬೆಲೆಯಲ್ಲಿ ಅಂಗೀಕೃತ ಸಂಸ್ಥೆಗಳಿಂದ ಪಡೆಯಲಾಗುತ್ತಿದೆ. ಉಳಿದ ರೂ. 4800ರ ಬೆಲೆಯ ಔಷಧಿಗಳನ್ನು ನಿಗಧಿತ ಬೆಲೆಯಲ್ಲಿ ಅಂಗೀಕೃತ ಸಂಸ್ಥೆಗಳಿಂದ ಪಡೆಯಲಾಗುತ್ತಿದೆ.

## ಔಷಧ ಪರೀಕ್ಷೆ ಪ್ರಯೋಗಾಲಯ

ಔಷಧಿಗಳ ಗುಣಮಟ್ಟವನ್ನು ಪರೀಕ್ಷಿಸಲು ಔಷಧ ಪರೀಕ್ಷಾ ಪ್ರಯೋಗಾಲಯದ ಒಂದು ಘಟಕವನ್ನು ತೆರೆಯಲಾಗಿದೆ. ಇದು ಸರ್ಕಾರಿ ಕೇಂದ್ರೀಯ ಔಷಧಾಗಾರ, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿದೆ.

## ಗಿಡಮೂಲಿಕೆಗಳ ತೋಟ

ಬೆಂಗಳೂರು ಮೈಸೂರು ಹಾಗೂ ಬಳ್ಳಾರಿಯ ಆಯುರ್ವೇದ ಕಾಲೇಜಿಗೆ ಹೊಂದಿಕೊಂಡಂತೆ ಸಣ್ಣ ಗಿಡಮೂಲಿಕೆಗಳ ತೋಟಗಳನ್ನು ನಿರ್ವಹಿಸಲಾಗುತ್ತಿದೆ. ಇದರಿಂದ ವಿದ್ಯಾರ್ಥಿಗಳ ಪಠ್ಯಕ್ರಮಕ್ಕೆ ಸಂಬಂಧಿಸಿದ ಪ್ರಯೋಗಾರ್ಥ ಬೋಧನೆಗೆ ಗಿಡಮೂಲಿಕೆಗಳು ಪ್ರಾತ್ಯಕ್ಷಿಕೆಯಾಗಿರುವುದು. ಅಲ್ಲದೆ ದಿನನಿತ್ಯ ಆಸ್ಪತ್ರೆಗೆ ಬೇಕಾಗುವ ಕೆಲವು ಔಷಧಿಗಳನ್ನು ತಯಾರಿಸಲು ಅನುಕೂಲವಾಗುವುದು. ಬೆಂಗಳೂರಿನ ವಿಶ್ವ ವಿದ್ಯಾನಿಲಯದ ಹತ್ತಿರದ 37 ಎಕರೆಯ ದನ್ವಂತರಿ ವನದಲ್ಲಿ ಅರಣ್ಯ ಇಲಾಖೆಯ ಸಹಾಯದೊಂದಿಗೆ ಗಿಡಮೂಲಿಕೆಗಳನ್ನು ಬೆಳಲಾಗುತ್ತಿದೆ. ಈಗ 600 ಕ್ಕೂ ಹೆಚ್ಚು ಗಿಡಮೂಲಿಕೆಗಳನ್ನು ಅಲ್ಲಿ ಬೆಳಸಲಾಗಿದೆ.

## ವೈದ್ಯಕೀಯ ವ್ಯಕ್ತಿ

ವೈದ್ಯಕೀಯ ವೃತ್ತಿಯನ್ನು ನಿಯಂತ್ರಿಸಲು ಈ ಕೆಳಕಂಡ ಎರಡು ಮಂಡಳಿಗಳಿವೆ.

### 1. ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ವೃತ್ತಿದಾರರ ಮಂಡಳಿ : ಬೆಂಗಳೂರು

ಈ ಮಂಡಳಿಯು ಆಯುರ್ವೇದ, ಯುನಾನಿ ಹಾಗೂ ಇಂಟಿಗ್ರೇಟೆಡ್ ವೈದ್ಯ ಪದ್ಧತಿಗಳ ವೈದ್ಯಕೀಯ ವೃತ್ತಿಯನ್ನು ನಿಯಂತ್ರಿಸುತ್ತದೆ. ದಿನಾಂಕ : 31-12-93 ರವರೆಗೆ ಈ ಪದ್ಧತಿಗಳಲ್ಲಿ ನೊಂದಾಯಿಸಲ್ಪಟ್ಟ ವೈದ್ಯ ವೃತ್ತಿದಾರರ ಮಾಹಿತಿ ಈ ಕೆಳಕಂಡಂತಿವೆ.

| | |
|---|---|
| ಆಯುರ್ವೇದ | 10709 |
| ಯುನಾನಿ | 703 |
| ಇಂಟಿಗ್ರೇಟೆಡ್ | 2105 |
| **ಒಟ್ಟು** | 13517 |

### 2. ಕರ್ನಾಟಕ ಹೋಮಿಯೋಪತಿ ವೈದ್ಯಪದ್ಧತಿಯ ಮಂಡಳಿ, ಬೆಂಗಳೂರು

ಈ ಮಂಡಳಿಯು ಹೋಮಿಯೋಪತಿ ವೃತ್ತಿಯನ್ನು ಹಾಗೂ ವೈದ್ಯ ಶಿಕ್ಷಣವನ್ನು ನಿಯಂತ್ರಿಸುತ್ತದೆ. ದಿನಾಂಕ : 31-3-1994ರವರೆಗೆ 4,721 ವೈದ್ಯ ವೃತ್ತಿದಾರರು ನೊಂದಾಯಿಸಲ್ಪಟ್ಟಿರುತ್ತಾರೆ.



# ಔಷಧ ನಿಯಂತ್ರಣ ಇಲಾಖೆಯ 1993-94ನೇ ಸಾಲಿನ (31ನೇ ಮಾರ್ಚ್ 1994 ರವರೆಗೆ) ವಾರ್ಷಿಕ ವರದಿ

ರಾಜ್ಯದಲ್ಲಿ ತಯಾರಾಗುವ ಹಾಗೂ ಮಾರಾಟಕ್ಕಾಗಿ ಸರಬರಾಜು ಮಾಡಲಾಗುತ್ತಿರುವ ಔಷಧಗಳ ಮೇಲೆ ಕಟ್ಟು ನಿಟ್ಟಾದ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳುವುದರ ಹಾಗೂ ಎಚ್ಚರಿಕೆ ವಹಿಸುವುದರ ಮೂಲಕ ಗ್ರಾಹಕರ ಆರೋಗ್ಯವನ್ನು ಕಾಪಾಡುವುದು ಹಾಗೂ ಆರೋಗ್ಯ ರಕ್ಷಣೆಯ ಜವಾಬ್ದಾರಿ ಹೊರುವುದು ಮತ್ತು ಉತ್ತಮ ಗುಣಮಟ್ಟದ ಔಷಧಗಳು ನಿಯಂತ್ರಿತ ಬೆಲೆಗಳಲ್ಲಿ ದೊರಕುವಂತೆ ಮಾಡುವುದು ಔಷಧ ನಿಯಂತ್ರಣ ಇಲಾಖೆಯ ಮುಖ್ಯ ಕರ್ತವ್ಯವಾಗಿದೆ.

ಕರ್ನಾಟಕ ರಾಜ್ಯದ ಔಷಧ ನಿಯಂತ್ರಣ ಇಲಾಖೆಯು ಈ ಕೆಳಕಂಡ ಕಾಯ್ದೆಗಳನ್ನು ಜಾರಿಗೊಳಿಸುವುದರಲ್ಲಿ ಮಾಡಬೇಕಾದ ಶಾಸನಬದ್ಧ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ.

1. ಔಷಧ ಮತ್ತು ಕಾಂತಿವರ್ಧಕಗಳ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಗಳ ಜಾರಿ.
2. ಔಷಧಗಳ (ಬೆಲೆ ನಿಯಂತ್ರಣ) ಆದೇಶ 1987, ಅವಶ್ಯ ವಸ್ತುಗಳ ಕಾಯ್ದೆಯಲ್ಲಿ ಹೊರಡಿಲಾಗಿರುವ ಆದೇಶ.
3. ಔಷಧ ಮತ್ತು ಮಂತ್ರೋಪಾಯ (ಆಕ್ಷೇಪಣೀಯ ಜಾಹಿರಾತು) ಅಧಿನಿಯಮ 1954 ಮತ್ತು ಅದರ ಮೇರೆಗಿನ ನಿಯಮಗಳು.
4. ಫಾರ್ಮಸಿ ಅಧಿನಿಯಮ 1948 ಮತ್ತು ವಿದ್ಯಾ ನಿಯಮಾವಳಿ.
5. ವಿಷವಸ್ತುಗಳ ಅಧಿನಿಯಮ 1919 ಮತ್ತು ಕರ್ನಾಟಕ ವಿಷವಸ್ತುಗಳ ಅಧಿನಿಯಮ 1966.
6. ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ ಮತ್ತು ಅದರ ಮೇರೆಗಿನ ನಿಯಮದಡಿಯಲ್ಲಿ ಬರುವ ಔಷಧಗಳಿಗೆ ಸಂಬಂಧಪಟ್ಟಂತೆ ಮಾದಕ ಔಷಧಗಳ ಹಾಗೂ ಮಾನಸಿಕ ಭ್ರಮೆಯನ್ನುಂಟು ಮಾಡುವ ವಸ್ತುಗಳ ಅಧಿನಿಯಮ 1985.

ಮೇಲ್ಕಂಡ ಅಧಿನಿಯಮಗಳ ಪ್ರಕಾರ ಔಷಧ ನಿಯಂತ್ರಣ ಇಲಾಖೆಯು ಕೆಳಕಂಡ ಪ್ರಕಾರ್ಯಗಳನ್ನು ನಿರ್ವಹಿಸುತ್ತದೆ.

1. ಪರವಾನಗಿ ನೀಡುವ ಸುವ್ಯವಸ್ಥೆಯ ಮೂಲಕ ಔಷಧ ತಯಾರಿಸುವ ಮತ್ತು ಮಾರಾಟ ಮಾಡುವ ಆವರಣಗಳಿಗೆ ಪ್ರಾಧಿಕಾರ ನೀಡುವುದು.
2. ನಕಲಿ ಔಷಧಗಳ ಮತ್ತು ಕಾಂತಿವರ್ಧಕಗಳ ತಯಾರಿಕೆಯಲ್ಲಿ ನಿರತರಾದವರ ಬಗ್ಗೆ ಪರಿವೀಕ್ಷಣಾ ಸಿಬ್ಬಂದಿ ವರ್ಗದವರು ಜಾಗರೂಕತೆ ವಹಿಸುವುದು.
3. ನಿಗದಿ ಪಡಿಸಿದ ಗುಣಮಟ್ಟಗಳಿಗನುಸಾರವಾಗಿ ಔಷಧ ಮತ್ತು ಕಾಂತಿವರ್ಧಕ ವಸ್ತುಗಳು ಇವೆಯೇ ಎಂಬುದನ್ನು ಪರಿವೀಕ್ಷಿಸುವ ಸಲುವಾಗಿ ಔಷಧ ತಯಾರಿಕಾ ಹಾಗೂ ಮಾರಾಟ ಘಟಕಗಳಿಂದ ಔಷಧ ಮತ್ತು ಕಾಂತಿವರ್ಧಕಗಳ

ಮಾದರಿಯನ್ನು ಪಡೆದುಕೊಂಡು ಅವುಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸುವುದರ ಮೂಲಕ ಅವುಗಳ ಗುಣಮಟ್ಟವನ್ನು ನಿಶ್ಚಯ ಪಡಿಸುವುದು. ಔಷಧ ನಿಯಂತ್ರಣ ಇಲಾಖೆಯು ಮೂರು ಮುಖ್ಯ ಭಾಗಗಳನ್ನು ಹೊಂದಿದೆ.

1. ಆಡಳಿತ ಮತ್ತು ಅಮಲು ಜಾರಿ
2. ಔಷಧ ಪರೀಕ್ಷಾ ಪ್ರಯೋಗಶಾಲೆ
3. ಫಾರ್ಮಸಿ ಶಿಕ್ಷಣ

## (1) ಆಡಳಿತ ಮತ್ತು ಅಮಲು ಜಾರಿ

### (ಅ) ಕೇಂದ್ರ ಸ್ಥಾನ ಸಂಘಟನೆ

ಔಷಧ ನಿಯಂತ್ರಣ ಇಲಾಖೆಯ ಹಾಗೂ ನಿಯಂತ್ರಣ ಪ್ರಾದಿಕಾರದ ಮುಖ್ಯಸ್ಥರಾಗಿ ಔಷಧ ನಿಯಂತ್ರಣಾಧಿಕಾರಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಔಷಧ ನಿಯಂತ್ರಣಾಧಿಕಾರಿಯವರೊಂದಿಗೆ ಒಬ್ಬ ಅಪರ ಔಷಧ ನಿಯಂತ್ರಕರು, ಮೂವರು ಉಪ ಔಷಧ ನಿಯಂತ್ರಕರು, ಮತ್ತು ನಾಲ್ಕು ಸಹಾಯಕ ಔಷಧ ನಿಯಂತ್ರಣಾಧಿಕಾರಿಗಳು ಹಾಗೂ ಐದು ಜನ ಔಷಧ ಪರಿಕ್ಷಕರುಗಳು ಕೇಂದ್ರ ಕಾರ್ಯಸ್ಥಾನದಲ್ಲಿದ್ದು ಸಹಕರಿಸುವರು. ರಾಜ್ಯದಲ್ಲಿ ಕಾಲಕಾಲಕ್ಕೆ ನಡೆಯುವ ಡಿಪ್ಲೊಮೊ ಫಾರ್ಮಸಿ ಪರೀಕ್ಷೆಗಳ ಸಲುವಾಗಿಯೇ ಪರೀಕ್ಷಾ ಪ್ರಾಧಿಕಾರ ಮಂಡಳಿಗೆ ಪ್ರತ್ಯೇಕವಾಗಿ ಒಬ್ಬ ಸಹಾಯಕ ಔಷಧ ನಿಯಂತ್ರಣಾಧಿಕಾರಿಯವರಿದ್ದಾರೆ. ಅಲ್ಲದೆ, ಪ್ರಾಧಿಕಾರ ಮಂಡಳಿಯಲ್ಲಿ ಒಬ್ಬರು ಛೇರ್ಮನ್ ಹಾಗೂ ಒಬ್ಬ ಸದಸ್ಯ ಕಾರ್ಯದರ್ಶಿಯವರು ಅಧಿಕಾರ ಹೊಂದಿರುತ್ತಾರೆ.

### (ಆ) ವಿಭಾಗೀಯ ಮತ್ತು ಜಿಲ್ಲಾ ಕಛೇರಿಗಳು

ಇಲಾಖೆಯ ಸುಸೂತ್ರ ಕಾರ್ಯನಿರ್ವಹಣೆಗೆ ಆರು ವಿಭಾಗೀಯ ಕಾರ್ಯಾಲಯಗಳು ಮತ್ತು ಪ್ರತಿ ಜಿಲ್ಲೆಯಲ್ಲಿಯೂ ಒಂದು ಔಷಧ ಪರಿವೀಕ್ಷಕರ ಕಾರ್ಯಾಲಯವೂ ಕೆಲಸ ಮಾಡುತ್ತಿದೆ. ಬೆಂಗಳೂರನ್ನು ಹೊರತು ಪಡಿಸಿ ಪ್ರತಿ ವಿಭಾಗೀಯ ಕಛೇರಿಯಲ್ಲಿಯೂ ಇಬ್ಬರು ಸಹಾಯಕ ಔಷಧ ನಿಯಂತ್ರಣಾಧಿಕಾರಿಗಳ ಆಡಳಿತಕ್ಕೆ ಒಳಪಟ್ಟಿದ್ದು ಜಿಲ್ಲೆಯ ಔಷಧ ಪರಿವೀಕ್ಷಕರು ಅವರಿಗೆ ಸಹಾಯಕರಾಗಿದ್ದಾರೆ. ಬೆಂಗಳೂರಿನ ವಿಭಾಗೀಯ ಕಛೇರಿಯಲ್ಲಿ ಮೂವರು ಸಹಾಯಕ ಔಷಧ ನಿಯಂತ್ರಕರು ಕಾರ್ಯ ನಿರ್ವಹಿಸುತ್ತಿದ್ದಾರೆ. ವಿಭಾಗೀಯ ಸಹಾಯಕ ಔಷಧ ನಿಯಂತ್ರಕರು ಔಷಧಗಳ ಮಾರಾಟ ಪರವಾನಗಿ ನೀಡುವಲ್ಲಿ ಪರವಾನಗಿ ಪ್ರಾಧಿಕಾರಿಯವರಾಗಿದ್ದಾರೆ.

ಇಲಾಖೆಯಲ್ಲಿರುವ ಪ್ರತಿಯೊಂದು ವಿಭಾಗೀಯ ಕಛೇರಿಯೂ 3 ಜಿಲ್ಲೆಗಳಿಂದ 4 ರವರೆಗೂ ಜಿಲ್ಲೆಗಳ ಕಾರ್ಯ ವ್ಯಾಪ್ತಿಯ ಕ್ಷೇತ್ರಾಧಿಕಾರ ಹೊಂದಿರುತ್ತದೆ. ಈ ಬಗೆಗಿನ ವಿವರಗಳು ಕೆಳಕಂಡಂತಿವೆ.

ಪ್ರತಿ ವಿಭಾಗೀಯ ಕಛೇರಿಗಳಿಗೆ ಒಳಪಟ್ಟಿರುವ ಜಿಲ್ಲೆಗಳು ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ವಿಭಾಗದ ಹೆಸರು | | ಒಳಪಟ್ಟ ಜಿಲ್ಲೆಗಳು |
|---|---|---|---|
| 1. | ಬೆಂಗಳೂರು | 1. | ಬೆಂಗಳೂರು (ನಗರ ಮತ್ತು ಗ್ರಾಮಾಂತರ) |
| | | 2. | ಕೋಲಾರ ಜಿಲ್ಲೆ |
| | | 3. | ತುಮಕೂರು ಜಿಲ್ಲೆ |
| 2. | ಬೆಳಗಾವಿ | 1. | ಬೆಳಗಾವಿ ಜಿಲ್ಲೆ |
| | | 2. | ಧಾರವಾಡ ಜಿಲ್ಲೆ |
| | | 3. | ಉತ್ತರ ಕನ್ನಡ ಜಿಲ್ಲೆ |
| 3. | ಬಳ್ಳಾರಿ | 1. | ಬಳ್ಳಾರಿ ಜಿಲ್ಲೆ |
| | | 2. | ರಾಯಚೂರು ಜಿಲ್ಲೆ |
| | | 3. | ಚಿತ್ರದುರ್ಗ ಜಿಲ್ಲೆ |
| 4. | ಗುಲ್ಬರ್ಗಾ | 1. | ಗುಲ್ಬರ್ಗಾ ಜಿಲ್ಲೆ |
| | | 2. | ಬಿಜಾಪುರ ಜಿಲ್ಲೆ |
| | | 3. | ಬೀದರ್ ಜಿಲ್ಲೆ |
| 5. | ಮೈಸೂರು | 1. | ಮೈಸೂರು ಜಿಲ್ಲೆ |
| | | 2. | ಮಂಡ್ಯ ಜಿಲ್ಲೆ |
| | | 3. | ಕೊಡಗು ಜಿಲ್ಲೆ |
| 6. | ಮಂಗಳೂರು | 1. | ದಕ್ಷಿಣ ಕನ್ನಡ ಜಿಲ್ಲೆ |
| | | 2. | ಶಿವಮೊಗ್ಗ ಜಿಲ್ಲೆ |
| | | 3. | ಹಾಸನ ಜಿಲ್ಲೆ |
| | | 4. | ಚಿಕ್ಕಮಗಳೂರು ಜಿಲ್ಲೆ |

ಕೋಲಾರ, ತುಮಕೂರು, ಧಾರವಾಡ, ಉತ್ತರ ಕನ್ನಡ, ರಾಯಚೂರು, ಚಿತ್ರದುರ್ಗ, ಬಿಜಾಪುರ, ಬೀದರ್, ಶಿವಮೊಗ್ಗ, ಹಾಸನ, ಚಿಕ್ಕಮಗಳೂರು, ಮಂಡ್ಯ ಮತ್ತು ಕೊಡಗು ಜಿಲ್ಲೆಯ ಪ್ರತಿಯೊಂದು ಕಛೇರಿಗಳಿಗೆ ಒಬ್ಬರು ಔಷಧ ಪರಿವೀಕ್ಷಕರು ಮುಖ್ಯಸ್ಥರಾಗಿರುತ್ತಾರೆ.

## ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ ಮತ್ತು ಅದರ ಮೇರೆಗಿನ ನಿಯಮಗಳ ಜಾರಿ

1993-94ನೇ (ಏಪ್ರಿಲ್ 1993 ರಿಂದ 31ನೇ ಮಾರ್ಚ್ 1994) ಅವಧಿಯಲ್ಲಿ ಈ ಅಧಿನಿಯಮ ಹಾಗೂ ಅದರ ಮೇರೆಗಿನ ನಿಯಮಗಳ ಮೇರೆಗೆ ಹೂಡಲಾದ ಕಾನೂನು ವ್ಯವಹರಣೆಗಳ ವಿವರಗಳು ಕೆಳಕಂಡಂತಿವೆ :

| | | |
|---|---|---|
| 1. | ವರ್ಷದ ಪ್ರಾರಂಭದಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು (1.4.93 ರಂದು) | 97 |
| 2. | 1993-94ನೇ ಸಾಲಿಗೆ (31.3.94ರ ತನಕ) ಹೂಡಿದ ಕಾನೂನು ವ್ಯವಹರಣೆಗಳು. | 21 |

3. ಒಟ್ಟು (31.3.94 ರ ತನಕ) 11

4. ಇತ್ಯರ್ಥವಾದ ಕಾನೂನು ವ್ಯವಹರಣೆಗಳು (31.3.94ರ ತನಕ) 1

ಅ. ನಿರ್ದೋಷಿಯೆಂದು ತೀರ್ಮಾನವಾದ ಬಿಡುಗಡೆ ಮಾಡಲಾದ ಮೊಕದ್ದಮೆಗಳು (31.3.94 ರ ತನಕ) 0

ಆ. ದೋಷ ಸಿದ್ಧವಾದ ಮೊಕದ್ದಮೆಗಳು (31.3.94 ರ ತನಕ)

5. 1994ರ ಮಾರ್ಚ್ ಕಡೆಯಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು 10

**1987 ರ ಔಷಧಗಳ (ಬೆಲೆ ನಿಯಂತ್ರಣ) ಆದೇಶದ ಜಾರಿ :**

1993-94ನೇ ಮಾರ್ಚ್ 31ರ ವರೆಗೆ ಈ ಆದೇಶದ ಜಾರಿಯ ಮೇರೆ ಹೂಡಲಾದ ಕಾನೂನು ವ್ಯವಹರಣೆಗಳ ಅಂಕಿ ಅಂಶಗಳು ಕೆಳಕಂಡಂತಿವೆ.

1. ವರ್ಷದ ಪ್ರಾರಂಭದಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು (1.4.93ರಲ್ಲಿ ಇದ್ದಂತೆ) 3

2. ಹೂಡಿದ ಕಾನೂನು ವ್ಯವಹರಣೆಗಳು (31.3.94ರ ವರೆಗೆ) 0

3. ಒಟ್ಟು (31.3.94 ರವರೆಗೆ) 4

4. ತೀರ್ಮಾನವಾದ ಕಾನೂನು ವ್ಯವಹರಣೆಗಳು 0

ಅ. ನಿರ್ದೋಷಿಯೆಂದು ತೀರ್ಮಾನವಾಗಿ ಬಿಡುಗಡೆಯಾದ ಪ್ರಕರಣಗಳು (31.3.94 ರವರೆಗೆ) 0

ಆ. ದೋಷ ಸಿದ್ದ ಪ್ರಕರಣಗಳು (31.3.94 ರ ವರೆಗೆ) 0

7. ಇತ್ಯರ್ಥವಾಗದೇ ಉಳಿದಿರುವ ಕಾನೂನು ವ್ಯವಹರಣೆಗಳು (31.3.94ರ ಅಂತ್ಯಕ್ಕೆ) 3

1993-94ನೇ ಸಾಲಿನಲ್ಲಿ ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಗಳ ಪ್ರಕಾರ 1-4-93 ರಿಂದ 31-3-94 ರವರೆಗೆ 174 ದೂರುಗಳು ಹಾಗೂ ಔಷಧಗಳ (ಬೆಲೆ ನಿಯಂತ್ರಣ) ಆದೇಶ 1987ರ ಪ್ರಕಾರ 28 ದೂರುಗಳು ಬಂದಿವೆ. ಔಷಧ ಮತ್ತು ಕಾಂತಿವರ್ಧಕಗಳ ಅಧಿನಿಯಮ 1940 ಮತ್ತು ಅದರ ಮೇರೆಗಿನ ನಿಯಮಗಳ ಪ್ರಕಾರ 212 ದೂರುಗಳನ್ನು ಹಾಗೂ ಔಷಧ (ಬೆಲೆ ನಿಯಂತ್ರಣ) ಆದೇಶ 1979 ಹಾಗೂ 1987ರ ಪ್ರಕಾರ 35 ದೂರುಗಳನ್ನು ತನಿಖೆ ಮಾಡಿ ಈ ಬಗ್ಗೆ ಸೂಕ್ತ ಕ್ರಮವನ್ನು ತೆಗೆದುಕೊಳ್ಳಲಾಗಿದೆ.

**ಔಷಧ ತಯಾರಿಕಾ ಘಟಕಗಳು :**

ಅಲೋಪತಿ ಔಷಧಗಳು ಮತ್ತು ಕಾಂತಿವರ್ಧಕಗಳ ಉತ್ಪಾದನಾ ಘಟಕಗಳು ಮತ್ತು ಅವುಗಳಿಗೆ ಕೊಟ್ಟ ಪರವಾನಗಿಗಳು ಕೆಳಕಂಡಂತಿವೆ. (31.3.94)

| ವರ್ಗ | ತಯಾರಕರುಗಳ ಒಟ್ಟು ಸಂಖ್ಯೆ | | | ಉತ್ಪಾದನಾ ಲೈಸನ್ಸ್‌ಗಳ ಒಟ್ಟು ಸಂಖ್ಯೆ | | |
|---|---|---|---|---|---|---|
| | ಸ್ವಂತ | ಸಾಲ | ಒಟ್ಟು | ಸ್ವಂತ | ಸಾಲ | ಒಟ್ಟು |
| 1. ಅಲೋಪತಿ (ರೀ-ಪ್ಯಾಕ್ಅಥವಾ ಮರು ಕಟ್ಟಿದಂತಹವೂ ಸೇರಿ) | 243 | 151 | 394 | 339 | 217 | 556 |
| 2. ಕಾಂತಿವರ್ಧಕಗಳು : ಪ್ರಸಾಧನಗಳು | 84 | 2 | 86 | 84 | 2 | 86 |
| 3. ರಕ್ತ ನಿಧಿಗಳು | 53 | - | 53 | 53- | - | 53 |
| 4. ಅನುಮೋದಿತ ಪ್ರಯೋಗ ಶಾಲೆಗಳು. | 03 | - | 03 | 03 | - | 03 |
| ಒಟ್ಟು | 383 | 153 | 536 | 479 | 219 | 698 |

1-4-93 ರಿಂದ 31-3-94ರ ಅವಧಿಯಲ್ಲಿ 572 ಔಷಧ ಉತ್ಪಾದನಾ ಘಟಕಗಳನ್ನು 15,494 ಮಾರಾಟ ಆವರಣಗಳನ್ನು ಮತ್ತು 103 ಆಸ್ಪತ್ರೆಗಳನ್ನೂ ಪರಿವೀಕ್ಷಿಸಲಾಯಿತು.

**ಔಷಧ ಮಾರಾಟ ಆವರಣಗಳು :**

1993-94ನೇ ಸಾಲಿನ ಮಾರ್ಚ್ 31ರಂದು ಇದ್ದ ಔಷಧ ಮಾರಾಟ ಆವರಣಗಳ ವಿಭಾಗೀಯ ಮಟ್ಟದ ಅಂಕಿ ಅಂಶಗಳು ಕೆಳಕಂಡಂತಿವೆ.

| ವಿಭಾಗ | ನಿರ್ಬಂದಿತ | ಚಿಲ್ಲರೆ | ಸಗಟು | ಒಟ್ಟು |
|---|---|---|---|---|
| ಬೆಂಗಳೂರು | 386 | 2397 | 997 | 3780 |
| ಬೆಳಗಾವಿ | 226 | 1094 | 347 | 1667 |
| ಬಳ್ಳಾರಿ | 41 | 781 | 183 | 1005 |
| ಮಂಗಳೂರು | 243 | 825 | 379 | 1447 |
| ಮೈಸೂರು | 118 | 582 | 142 | 842 |
| ಗುಲ್ಬರ್ಗಾ | 62 | 886 | 186 | 1134 |
| ಒಟ್ಟು | 1076 | 6565 | 2234 | 9875 |

**ಟಿಪ್ಪಣಿ** : 1-4-93 ರಿಂದ 31-3-94ರ ವರೆಗೆ, ಅಂಗಡಿಗಳನ್ನು ಮುಚ್ಚಿದ ಕಾರಣ, ಸಂಘಟನೆ ಬದಲಾವಣೆ, ಸಂಸ್ಥೆಯ ಬದಲಾವಣೆ, ಪರ್ರವಾನಗಿ ನವೀಕರಣ ಮಾಡದ ಕಾರಣ, 1647 ಮಾರಾಟ ಸಂಸ್ಥೆಗಳ ಪರವಾನಗಿಗಳನ್ನು ರದ್ದುಗೊಳಿಸಲಾಗಿದೆ.

## ಅತ್ಯಾವಶ್ಯಕ ಔಷಧಗಳ ಪೂರೈಕೆಯ ಮೇಲ್ವಿಚಾರಣೆ

ಉತ್ಪಾದಕರುಗಳು ಹಾಗೂ ಸಂಬಂಧಪಟ್ಟ ಔಷಧ ನಿಯಂತ್ರಣಾಧಿಕಾರಿಗಳನ್ನು ನೇರವಾಗಿ ಸಂಪರ್ಕಿಸುವ ಮೂಲಕ ಜೀವ ರಕ್ಷಿಸುವ ಅತ್ಯಾವಶ್ಯಕ ಔಷಧಗಳ ಲಭ್ಯತೆಗಳನ್ನು ಖಚಿತಪಡಿಸಿ ಕೊಳ್ಳಲಾಗುವುದು. ಈ ಸಂಬಂಧದಲ್ಲಿನ ಮಾಸಿಕ ವರದಿಗಳನ್ನು ದೆಹಲಿಯ ಪೆಟ್ರೋಲಿಯಂ ಮತ್ತು ರಾಸಾಯನಿಕ ಸಚಿವಾಲಯಕ್ಕೆ ಕಳುಹಿಸಿ ಕೊಡಲಾಗುತ್ತಿದೆ.

## ಮಾದಕ ಔಷಧಗಳ ಹಾಗೂ ಮಾನಸಿಕ ಭ್ರಮೆಯನ್ನುಂಟು ಮಾಡುವ ಇತರೆ ಔಷಧಗಳ ದುರುಪಯೋಗವನ್ನು ತಡೆಗಟ್ಟುವುದು.

ಮಾದಕ ವಸ್ತುಗಳ ಹಾಗೂ ಮಾನಸಿಕ ಭ್ರಮೆಯನ್ನುಂಟು ಮಾಡುವ ವಸ್ತುಗಳ ಕಾಯಿದೆ ಅಧಿನಿಯಮದ 41ನೇ ಮತ್ತು 53ನೇ ಸೆಕ್ಷನ್ನ ಅಡಿ ರಾಜ್ಯ ಸರ್ಕಾರವು ಹೆಚ್.ಡಿ. 214ಇಡಿಸಿ 85ಮತ್ತು ಹೆಚ್ ಡಿ 214ಇಡಿಸಿ 85(II), ದಿನಾಂಕ 11ನೇ ಸೆಪ್ಟೆಂಬರ್ 1986ರ ಅಧಿಸೂಚನೆಯ ಮೂಲಕ ಔಷಧ ನಿಯಂತ್ರಣ ಇಲಾಖೆಯ ಔಷಧ ಪರಿವೀಕ್ಷಕರುಗಳನ್ನೂ ಸಹ ಅಧಿನಿಯಮಕ್ಕೊಳಪಡುವ ಅಪರಾಧಗಳನ್ನು ತನಿಖೆ ಮಾಡುವ ಅಧಿಕಾರ ನೀಡಿದೆ. ಪರೀವೀಕ್ಷಕರುಗಳು ವೈದ್ಯಕೀಯ ಉಪಚಾರಕ್ಕಾಗಿ ನ್ಯಾಯಬದ್ಧವಾಗಿ ತಯಾರಾಗುವ ಹಾಗೂ ಮಾರಾಟವಾಗುವ ಮಾದಕ ಹಾಗೂ ಮಾನಸಿಕ ಭ್ರಮೆಯನ್ನುಂಟು ಮಾಡುವ ವಸ್ತುಗಳ ಬಗ್ಗೆ ಜಾಗರೂಕತೆ ವಹಿಸುತ್ತಾರೆ.

ಮಾದಕ ಔಷಧಗಳ ಹಾಗೂ ಮಾನಸಿಕ ಭ್ರಮೆಯನ್ನುಂಟು ಮಾಡುವ ಔಷಧಗಳ ದುರುಪಯೋಗ ತಡೆಗಟ್ಟುವ ದಿಸೆಯಲ್ಲಿ ಈ ಇಲಾಖೆ ಎಚ್ಚರವಹಿಸುತ್ತಿದೆ. ಇಂತಹ ಔಷಧಗಳ ತಯಾರಿಕೆ ಹಾಗೂ ಮಾರಾಟದ ಬಗ್ಗೆ ಬಿಗಿಯಾದ ನಿಯಂತ್ರಣವನ್ನು ಜಾರಿಗೆ ತಂದಿದೆ.

### ಔಷಧ ತಯಾರಿಕಾ ಸಂಸ್ಥೆಗಳಿಗೆ ಮಾದಕ ವಸ್ತುಗಳ ಹಂಚಿಕೆ ಪ್ರಮಾಣ

ಔಷಧ ತಯಾರಿಕಾ ಸಂಸ್ಥೆಗಳಿಗೆ ಮಾದಕ ವಸ್ತುಗಳ ಹಂಚಿಕ ಪ್ರಮಾಣ ಕೆಳಕಂಡಂತಿದೆ.

| ಕ್ರಮ ಸಂ. | ಔಷಧಗಳ ಹೆಸರು | ಹಂಚಿಕೆಯಾದ ಪ್ರಮಾಣ ಕೆ.ಜಿ. ಗಳಲ್ಲಿ 1994ರ ಮಾರ್ಚ್ ಕೊನೆಯವರೆಗೆ |
|---|---|---|
| 1. | ಕೋಡಿನ್ | 1004.00 |
| 2. | ಈಥೈಲ್ ಮಾರ್ಫಿನ್ (ಡಯೋನೈನ್) | 15.00 |
| 3. | ಔಷಧೀಯ ಅಫೀಮು | 01.50 |
| 4. | ಡೆಕ್ಸ್ಟ್ರೋಪ್ರೊಪಾಕ್ಸಿಫೇನ್ | 800.00 |

### 2. ಔಷಧ ಪರೀಕ್ಷಾ ಪ್ರಯೋಗಾಲಯ :

ಕರ್ನಾಟಕ ರಾಜ್ಯ ಔಷಧ ನಿಯಂತ್ರಣ ಇಲಾಖೆಯ ಆಡಳಿತ ಹತೋಟಿಗೆ ಒಳಪಟ್ಟಿರುವ ಒಂದು ಸುಸಜ್ಜಿತ ಔಷಧ ಪ್ರಯೋಗಾಲಯವು ಕೆಲಸ ಮಾಡುತ್ತಿದೆ. ಇದನ್ನು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಾರಂಭಿಸಲಾಯಿತು.

ಈ ಪ್ರಯೋಗ ಶಾಲೆಯು ವ್ಯಾಕ್ಸಿನ್, ಸೀರಾ ಮತ್ತು ರಕ್ತವನ್ನು ಹೊರತುಪಡಿಸಿ ಎಲ್ಲಾ ವಿಧವಾದ ಔಷಧಗಳನ್ನು ವಿಶ್ಲೇಷಿಸುವ ಸಾಮರ್ಥ್ಯ ಹೊಂದಿದೆ. ಈ ಔಷಧ ಪ್ರಯೋಗಾಲಯದ ಮುಖ್ಯ ಕಾರ್ಯ ಚಟುವಟಿಕೆಗಳು ಈ ಕೆಳಕಂಡಂತಿವೆ.

1. ಔಷಧಗಳ ಸಂಯೋಜನೆಯ ಗುಣಮಟ್ಟ, ಪರಿಶುದ್ಧತೆ ಮತ್ತು ಶಕ್ತಿ ತಿಳಿಯುವ ಉದ್ದೇಶಕ್ಕಾಗಿ ಔಷಧ ಪರಿವೀಕ್ಷಕರು ಕಳುಹಿಸಿದ ಔಷಧ ಮತ್ತು ಕಾಂತಿವರ್ಧಕಗಳ ಕಾನೂನುಬದ್ಧ ಮಾದರಿಗಳನ್ನು ಪರೀಕ್ಷಿಸುವುದು ಮತ್ತು ವಿಶ್ಲೇಷಿಸುವುದು ಹಾಗೂ ನಿಗಧಿಪಡಿಸಿದ ನಮೂನೆಗಳಲ್ಲಿ ಪರೀಕ್ಷಾ ವರದಿಗಳನ್ನು ನೀಡುವುದು.

2. ಔಷಧ ಪರಿವೀಕ್ಷಕರು ಓರಿಸ್ಸಾ, ದೆಹಲಿಯ ಕೇಂದ್ರ ಆಡಳಿತ ಪಾಂಡಿಚೇರಿ, ಕೇರಳ ಮತ್ತು ಮದ್ರಾಸಿನ ಕೇಂದ್ರಿಯ ಔಷಧ ಮಳಿಗೆಗಳು ಕಳುಹಿಸುವ ಕಾನೂನುಬದ್ಧ ಮಾದರಿಗಳನ್ನು ಪರೀಕ್ಷಿಸುವುದು ಮತ್ತು ವಿಶ್ಲೇಷಿಸುವುದು ಹಾಗೂ ಈ ಬಗ್ಗೆ ನಿಗಧಿಪಡಿಸಿದ ನಮೂನೆಗಳಲ್ಲಿ ಪರೀಕ್ಷಾ ವರದಿಗಳನ್ನು ನೀಡುವುದು.

3. ಔಷಧಗಳ ಗುಣಮಟ್ಟವನ್ನು ತಿಳಿಯಲು ಮಾದರಿಗಳನ್ನು ಪರೀಕ್ಷೆ ಮಾಡುವ ಮೂಲಕ ಸರ್ಕಾರಿ ಔಷಧ ಮಳಿಗೆ ಹಾಗೂ ರಾಜ್ಯದ ಇತರ ಸರ್ಕಾರೀ ಸಂಸ್ಥೆಗಳಿಗೆ ಔಷಧಗಳನ್ನು ಖರೀದಿ ಮಾಡಲು ನೆರವು ನೀಡುವುದು.

ಔಷಧ ಪರೀಕ್ಷಾ ಪ್ರಯೋಗಾಲಯಕ್ಕೆ ಇಬ್ಬರು ಅಧೀಕ್ಷಕರಿದ್ದು, ಒಬ್ಬರು ಕಛೇರಿಯ ಆಡಳಿತಕ್ಕೆ ಸಂಬಂಧಿಸಿದವರಾಗಿದ್ದು, ಮತ್ತೊಬ್ಬರು ಪ್ರಯೋಗಾಲಯಗಳ ಮೇಲುಸ್ತುವಾರಿ ಹೊಂದಿದವರಾಗಿದ್ದಾರೆ. ಇವರೊಂದಿಗೆ ಇಬ್ಬರು ಹಿರಿಯ ರಸಾಯನಜ್ಞರು, ಒಬ್ಬರು ಜೀವ ರಸಾಯನಜ್ಞರು, ಒಬ್ಬರು ಔಷಧ ವಿಜ್ಞಾನಿ, ಒಬ್ಬರು ಔಷಧ ಸಂಜ್ಞಾನಿ ಹಾಗೂ ಒಬ್ಬರು ಜೀವಾಣು ಶಾಸ್ತ್ರಜ್ಞರಿದ್ದಾರೆ.

ಹಿರಿಯ ರಸಾಯನಜ್ಞ, ಜೀವ ರಸಾಯನಜ್ಞ, ಔಷಧ ವಿಜ್ಞಾನಿ ಮತ್ತು ಔಷಧ ಸಂಜ್ಞಾನಿ ಇವರುಗಳನ್ನು ಸರ್ಕಾರದ ವಿಶ್ಲೇಷಕರನ್ನಾಗಿ ಅಧಿಸೂಚಿಸಲಾಗಿದೆ. ಇವರುಗಳು ಲಸಿಕೆಗಳು ಹಾಗೂ ಸೀರಾಗಳನ್ನು ಹೊರತು ಪಡಿಸಿ, ಎಲ್ಲಾ ವಿವಿಧ ಔಷಧಗಳು ಹಾಗೂ ಪ್ರಸಾಧನಗಳ ವಿಶ್ಲೇಷಕರಾಗಿದ್ದು, ಈ ಮೇಲೆ ಹೇಳಿರುವ ಎಲ್ಲಾ ರಾಜ್ಯಗಳ ಔಷಧ ವಿಶ್ಲೇಷಕರಾಗಿ ನಿಯುಕ್ತರಾಗಿದ್ದಾರೆ.

**ಔಷಧ ಪ್ರಯೋಗಶಾಲೆಯು ಸಧ್ಯಕ್ಕೆ ಕೆಳಕಂಡ ವಿಭಾಗಗಳನ್ನು ಹೊಂದಿದೆ:**

1. ಔಷಧ ಮತ್ತು ರಸಾಯನ ಶಾಸ್ತ್ರ (Pharmaceutical Chemistry)
2. ಸೂಕ್ಷ್ಮ ಜೀವಾಣು ವಿಜ್ಞಾನ (Microbiology)
3. ಔಷಧ ವಿಜ್ಞಾನ (Pharmacology)
4. ಔಷಧ ಸಂಜ್ಞಾನ (Pharmacognosy)
5. ಜೀವಾಣು ವಿಜ್ಞಾನ (Bacteriology)

ಒಂದು ಪರಿಪೂರ್ಣ ಪ್ರಾಣಿಶಾಲೆ ಸಹ ಈ ಔಷಧ ಪರೀಕ್ಷಾ ಪ್ರಯೋಗಶಾಲೆಯಲ್ಲಿದೆ. ಇದರ ಹೊಣೆಗಾರಿಕೆ ಪಶುಸಂಗೋಪನಾ ಇಲಾಖೆಯಿಂದ ನಿಯೋಜಿತರಾದ ಪಶುವೈದ್ಯರಿಗೆ ಸೇರಿದೆ.

**ಈ ಪ್ರಯೋಗಶಾಲೆಯಲ್ಲಿ ವಿಶ್ಲೇಷಣೆಗೆ ಬಂದ ಮಾದರಿಗಳ ವಿವರ ಕೆಳಕಂಡಂತಿದೆ.**

1993 ಏಪ್ರಿಲ್ 1 ರಿಂದ 1994 ಮಾರ್ಚ್ ಕಡೆಯವರೆಗೆ ಸ್ವೀಕರಿಸಿದ ಮಾದರಿಗಳು.

| | | |
|---|---|---|
| 1. | ಔಷಧ ಪರಿವೀಕ್ಷಕರಿಂದ ಕಳುಹಿಸಲ್ಪಟ್ಟ ಕಾನೂನು ಬದ್ಧ ಮಾದರಿಗಳು | 3602 |
| 2. | ಸರ್ಕಾರಿ ಆಸ್ಪತ್ರೆಗಳು ಮತ್ತು ಸರ್ಕಾರಿ ಔಷಧ ಮಳಿಗೆಗಳು ಮತ್ತು ಔಷಧ ಪರಿವೀಕ್ಷಕರಿಂದ ಕಳುಹಿಸಲ್ಪಟ್ಟ ಅನೌಪಚಾರಿಕ ಮಾದರಿಗಳು. | 17 |
| 3. | ಕರ್ನಾಟಕ ರಾಜ್ಯದ ಔಷಧ ತಯಾರಕರಿಂದ ಸ್ವೀಕರಿಸಲಾದ ಮಾದರಿಗಳು. | – |
| | **ಒಟ್ಟು** | **3619** |
| | ಮುಂದುವರಿಸಲಾದ ಹಿಂದಿನ ವರ್ಷದಲ್ಲಿ ಉಳಿದಿದ್ದ ಮಾದರಿಗಳು | 1128 |
| | **ಒಟ್ಟು** | **4747** |

**1.4.93 ರಿಂದ 31.3.94ರ ವರೆಗೆ ವಿಶ್ಲೇಷಿಸಲಾದ ಮಾದರಿಗಳು :**

| | | |
|---|---|---|
| 1. | ಒಟ್ಟು ವಿಶ್ಲೇಷಿಸಲಾದ ಮಾದರಿಗಳು | 2777 |
| 2. | ಉತ್ತಮ ಗುಣಮಟ್ಟವಿರುವುದಾಗಿ ಕಂಡು ಬಂದಿರುವ ಮಾದರಿಗಳು | 2600 |
| 3. | ಉತ್ತಮ ಗುಣಮಟ್ಟದ್ದಲ್ಲವೆಂದು ಕಂಡು ಬಂದಿರುವ ಮಾದರಿಗಳು | 174 |
| 4. | ಭಾಗಶಃ ವಿಶ್ಲೇಷಿಸಲಾದ ಮಾದರಿಗಳು | 3 |

## ಗ್ರಂಥಾಲಯ

ಔಷಧ ಪರಿವೀಕ್ಷಣಾ ಪ್ರಯೋಗಾಲಯವು ಸುವ್ಯವಸ್ಥಿತ ಗ್ರಂಥಾಲಯವನ್ನು ಹೊಂದಿದ್ದು ಇದರಲ್ಲಿ ಎಲ್ಲಾ ಬಗೆಯ ಆಕ್ಷರ ಗ್ರಂಥಗಳೂ ಹಾಗೂ ರಸಾಯನಿಕ ಸಂಗ್ರಹಗಳೂ ಲಭ್ಯವಿದೆ. ಸಿಬ್ಬಂದಿ ವರ್ಗಕ್ಕೆ ಪ್ರಪಂಚದಲ್ಲಿ ಔಷಧ ತಯಾರಿಕಾ ವಿಜ್ಞಾನದಲ್ಲಿ ಆಗುತ್ತಿರುವ ಇತ್ತೀಚಿನ ಬೆಳವಣಿಗೆ ಮತ್ತು ಸಂಶೋಧನೆಗಳ ಬಗ್ಗೆ ಕಾಲೋಚಿತ ಮಾಹಿತಿಯನ್ನು ಒದಗಿಸುವ ಸಲುವಾಗಿ ಹಲವಾರು ಭಾರತೀಯ ಹಾಗೂ ವಿದೇಶಿ ನಿಯತಕಾಲಿಕ ಪತ್ರಿಕೆಗಳನ್ನು ತರಿಸಲಾಗುತ್ತಿದೆ. ಈ ಗ್ರಂಥಾಲಯ ಸೌಲಭ್ಯವನ್ನು ನಮ್ಮ ರಾಜ್ಯದ ಔಷಧ ತಯಾರಕರಿಗೂ ಔಷಧ ವಿಜ್ಞಾನ ಅಭ್ಯಸಿಸುತ್ತಿರುವ ವಿದ್ಯಾರ್ಥಿಗಳಿಗೂ ಮತ್ತು ಔಷಧ ವಿಜ್ಞಾನದ ಬಗ್ಗೆ ಸಂಶೋಧನೆ ನಡೆಸುತ್ತಿರುವ ಅಭ್ಯರ್ಥಿಗಳಿಗೂ ಒದಗಿಸಲಾಗಿದೆ. ಅರ್ಹ ಗ್ರಂಥ ಪಾಲಕರನ್ನು ಈ ಗ್ರಂಥಾಲಯ ಹೊಂದಿದೆ.

## 3. ಫಾರ್ಮಸಿ ಶಿಕ್ಷಣ

ಫಾರ್ಮಸಿ ಶಿಕ್ಷಣಕ್ಕೆ ಸಂಬಂಧಿಸಿದಂತೆ, ಎರಡು ಪ್ರಮುಖ ಅಂಗಗಳಿವೆ. ಅವುಗಳೆಂದರೆ :

ಅ) ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ, ಬೆಂಗಳೂರು.

ಆ) ಪರೀಕ್ಷಾ ಪ್ರಾಧಿಕಾರ ಮಂಡಳಿ, ಬೆಂಗಳೂರು.

**ಅ) ಸರ್ಕಾರೀ ಔಷಧ ವಿಜ್ಞಾನ ಮಹಾ ವಿದ್ಯಾಲಯ, ಬೆಂಗಳೂರು :**

ಔಷಧ ನಿಯಂತ್ರಣ ಇಲಾಖೆಯ ಆಡಳಿತದ ಹತೋಟಿಯಲ್ಲಿ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ (ಸರ್ಕಾರಿ ಫಾರ್ಮಸಿ ಕಾಲೇಜು) 1964ರಿಂದ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಇಲ್ಲಿ ಡಿಪ್ಲೊಮಾ, ಪದವಿ ಹಾಗೂ ಸ್ನಾನಕೋತ್ತರ ಮಟ್ಟದವರೆಗೆ ಶಿಕ್ಷಣ ಪಡೆಯಲು ಸಕಲ ಸೌಲಭ್ಯಗಳಿವೆ. ಈ ಸಂಸ್ಥೆಯಲ್ಲಿ ಸ್ನಾತಕೋತ್ತರ ಪದವಿ ವ್ಯಾಸಂಗವನ್ನು ನಾಲ್ಕು ವಿಜ್ಞಾನ ವಿಭಾಗಗಳಲ್ಲಿ ಅಂದರೆ ಔಷಧ ಮತ್ತು ತಂತ್ರಜ್ಞಾನ (Pharmaceutical Technology) ಔಷಧ ಶಾಸ್ತ್ರ (Pharmacology), ಔಷಧ ಸಂಜ್ಞಾನ (Pharmacognosy) ಮತ್ತು ಔಷದ ರಸಾಯನ ಶಾಸ್ತ್ರ (Pharmaceutical Chemistry) ಗಳಲ್ಲಿ ನಡೆಸಲು ಭಾರತ ಸರ್ಕಾರ ಶೇಕಡಾ 100 ಭಾಗ ಅನುದಾನ ನೀಡುತ್ತಿದೆ. ಇದರಂತೆ ಪ್ರತಿಯೊಂದು ವಿಭಾಗದಲ್ಲೂ 6 ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಲಾಗುತ್ತಿದೆ.

ಈ ಮಹಾ ವಿದ್ಯಾಲಯದಲ್ಲಿ ಒಬ್ಬ ಪ್ರಾಂಶುಪಾಲರು, 6 ಪ್ರಾಧ್ಯಾಪಕರೂ, 9 ಸಹಾಯಕ ಪ್ರಾಧ್ಯಾಪಕರೂ ಹಾಗೂ 14 ಭೋದಕರು ಕೆಲಸ ಮಾಡುತ್ತಿದ್ದಾರೆ.

ಕರ್ನಾಟಕ ಸರ್ಕಾರವು ಈ ಮಹಾ ವಿದ್ಯಾಲಯಕ್ಕೆ 4 ಅಂತಸ್ಥಿನ ಹೊಸ ಕಟ್ಟಡವನ್ನು ಕಟ್ಟುವ ಯೋಜನೆಗೆ ಅನುಮೋದನೆ ನೀಡಿದ್ದು, ನೆಲ, ಮೊದಲನೆಯ ಹಾಗೂ ಎರಡನೆಯ ಮಹಡಿಗಳ ಕಟ್ಟಡ ಪೂರ್ಣಗೊಂಡಿದ್ದು ಅವುಗಳಲ್ಲಿ ಭೋದಕ ಕೊಠಡಿಗಳನ್ನು ಮತ್ತು ಪ್ರಯೋಗಾಲಯಗಳನ್ನು ನಡೆಸಲಾಗುತ್ತಿದೆ. ಇದಲ್ಲದೆ ಆಡಳಿತ ಕಛೇರಿ, ಅಧ್ಯಾಪಕರುಗಳ ಕೊಠಡಿ ಮತ್ತು ಗ್ರಂಥಾಲಯ ಸಹ ಈ ಪೂರ್ಣಗೊಂಡಿರುವ ಕಟ್ಟಡದಲ್ಲಿ ಇವೆ.

ಈ ವರ್ಷ ಬೆಂಗಳೂರು ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯದಿಂದ ಬೆಂಗಳೂರು ವಿಶ್ವ ವಿದ್ಯಾನಿಲಯ ನಡೆಸುತ್ತಿರುವ ಪದವಿ ಪರೀಕ್ಷೆಗೆ ಕುಳಿತಿದ್ದ 54 ಜನ ವಿದ್ಯಾರ್ಥಿಗಳಲ್ಲಿ 26 ಜನರೂ ಮತ್ತು ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ 22 ಜನ ವಿದ್ಯಾರ್ಥಿಗಳಲ್ಲಿ 22 ಜನರೂ ತೇರ್ಗಡೆಯಾಗಿದ್ದಾರೆ.

**ಆ) ಪರೀಕ್ಷಾ ಪ್ರಾಧಿಕಾರ ಮಂಡಳಿ, ಬೆಂಗಳೂರು.**

ಕರ್ನಾಟಕ ಸರ್ಕಾರವು ರಾಜ್ಯದಲ್ಲಿ ಭಾರತದ ಫಾರ್ಮಸಿ ಪರಿಷತ್ತು ರೂಪಿಸಿರುವ ಶಿಕ್ಷಣ ನಿಯಮಗಳನ್ನು ಜಾರಿಗೆ ತರುವುದರ ಸಲುವಾಗಿ ಒಂದು ಪರೀಕ್ಷಾ ಪ್ರಾಧಿಕಾರ ಮಂಡಳಿಯನ್ನು ಅಪರ ಔಷಧ ನಿಯಂತ್ರಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಿದೆ. ಈ ಮಂಡಳಿಯಲ್ಲಿ ಒಬ್ಬ ಸದಸ್ಯ ಕಾರ್ಯದರ್ಶಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಮಂಡಳಿಯ ಆಡಳಿತವನ್ನು ಒಬ್ಬ ಸಹಾಯಕ ಔಷಧ ನಿಯಂತ್ರಣಾಧಿಕಾರಿಯವರು ನಿರ್ವಹಿಸುತ್ತಿದ್ದಾರೆ.

ಈ ಮಂಡಳಿಯು ಡಿಪ್ಲೊಮಾ ಮಟ್ಟದ ಫಾರ್ಮಸಿ ಪರೀಕ್ಷೆಗಳನ್ನು ನಡೆಸುತ್ತಿದೆ. ಈ ವರ್ಷ ವಿದ್ಯಾ ಸಂಸ್ಥೆಗಳಿಂದ ಒಟ್ಟು 9,620 ವಿದ್ಯಾರ್ಥಿಗಳು ಪೂರ್ವಾಭಾವಿ ಡಿಪ್ಲೊಮಾ ಪರೀಕ್ಷೆಗೆ ಕುಳಿತಿದ್ದು ಅದರಲ್ಲಿ 1.737 ವಿದ್ಯಾರ್ಥಿಗಳು ತೇರ್ಗಡೆಯಾಗಿರುತ್ತಾರೆ. ಅಂತಿಮ ಪರೀಕ್ಷೆಯಲ್ಲಿ ಒಟ್ಟು 8128 ವಿದ್ಯಾರ್ಥಿಗಳು ಕುಳಿತಿದ್ದು ಅದರಲ್ಲಿ 2111 ವಿದ್ಯಾರ್ಥಿಗಳು ತೇರ್ಗಡೆಯಾಗಿದ್ದಾರೆ.

## ಹಣಕಾಸು

## 1993-94ನೇ ಸಾಲಿನ ಆಯವ್ಯಯ

### ವ್ಯಯ

| ಕ್ರಮ ಸಂಖ್ಯೆ | ಆಯವ್ಯಯ ಶೀರ್ಷಿಕೆ | ಹಂಚಿಕೆ1993-94ಕ್ಕೆ (ಲಕ್ಷ ರೂಗಳಲ್ಲಿ) | | ವ್ಯಯ 1993-94 (ಲಕ್ಷ ರೂ.ಳಲ್ಲಿ) | |
|---|---|---|---|---|---|
| | | ಯೋಜನೆ | ಯೋಜನೇತರ | ಯೋಜನೆ | ಯೋಜನೇತ |
| 1. | 2210-06-104-0-01 ಔಷಧ ನಿಯಂತ್ರಕರು | 30.00 | 112.47 | 7.88 | 102.2 |
| 2. | 2210-06-104-0-02 ಔಷಧ ಪರೀಕ್ಷಾ ಪ್ರಯೋಗಾಲಯ | 8.00 | 64.11 | 1.82 | 47.7 |
| 3. | 2210-05-105-114 ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ | 6.00 | 63.95 | ಇಲ್ಲ | 61.4 |
| 4. | 2210-05-105-1-15 ಕೇಂದ್ರ ಪುರಸ್ಕೃತ ಯೋಜನೆ | 20.00 | 10.30 | 13.97 | 14.6 |
| | ಒಟ್ಟು | 64.00 | 250.83 | 23.67 | 226.0 |

### ರಾಜಸ್ವ ಜಮೆ

| ಕ್ರಮ ಸಂಖ್ಯೆ | ಆಯವ್ಯಯ ಲೆಕ್ಕ ಶೀರ್ಷಿಕೆ | ಲಕ್ಷ ರೂ.ಗಳ |
|---|---|---|
| 1. | 0210-04-104-02 ಔಷಧ ನಿಯಂತ್ರಕರು | 9.0 |
| 2. | 0210-03-105-01 ಸರ್ಕಾರಿ ಔಷದ ವಿಜ್ಞಾನ ಮಹಾವಿದ್ಯಾಲಯ ಮತ್ತು ಪರೀಕ್ಷಾ ಪ್ರಾಧಿಕಾರ ಮಂಡಳಿ. | 39.3 |
| | ಒಟ್ಟು | 48.4 |

# ಔಷಧ ನಿಯಂತ್ರಣ ಇಲಾಖೆಗೆ ಸಂಬಂಧ ಪಟ್ಟ ಸಂಕ್ಷಿಪ್ತ ಅಂಕಿ ಅಂಶಗಳು

| ಕ್ರಮ ಸಂಖ್ಯೆ | ಸಂಕ್ಷಿಪ್ತಗಳು | 88-89 | 89-90 | 90-91 | 91-92 | 92-93 | 93-94 |
|---|---|---|---|---|---|---|---|
| | **ಅ. ಆಡಳಿತ ಮತ್ತು ಆಮಲು ಜಾರಿ :** | | | | | | |
| | **ಔಷಧ ತಯಾರಿಕಾ ಘಟಕಗಳು** | | | | | | |
| (ಅ) | 1. ಅಲೋಪತಿ ಔಷಧಗಳು (ರೀಪ್ಯಾಕಿಂಗ್ ಸೇರಿ) | 316 | 316 | 384 | 428 | 450 | 450 |
| | 2. ಕಾಂತಿವರ್ಧಕಗಳು :ಪ್ರಸಾಧನಗಳು | 69 | 58 | 71 | 74 | 82 | 86 |
| | ಒಟ್ಟು ಔಷಧ ತಯಾರಿಕಾ ಘಟಕಗಳು | 385 | 374 | 455 | 502 | 532 | 536 |
| (ಆ) | ಔಷಧ ತಯಾರಿಕಾ ಪರವಾನಗಿಗಳು | 497 | 477 | 581 | 646 | 695 | 698 |
| | ಒಟ್ಟು ಔಷಧ ಮಾರಾಟ ಆವರಣಗಳು : | 10021 | 8629 | 9256 | 10591 | 9685 | 9875 |
| | **ಪರಿವೀಕ್ಷಣೆಗಳು :** | | | | | | |
| (ಅ) | ಮಾರಾಟ ಆವರಣಗಳು | 12565 | 11755 | 13380 | 13015 | 12253 | 15494 |
| (ಆ) | ತಯಾರಿಕಾ ಘಟಕಗಳು | 469 | 512 | 402 | 350 | 321 | 572 |
| (ಇ) | ಆಸ್ಪತ್ರೆಗಳು | 107 | 129 | 121 | 97 | 82 | 103 |
| | **ಪರವಾನಗಿಗಳು :** | | | | | | |
| (ಅ) | ಮಾರಾಟ ಪರವಾನಗಿಗಳ ಮಂಜೂರು | 2151 | 2926 | 2664 | 2501 | 1828 | 1837 |
| (ಆ) | ಮಾರಾಟ ಪರವಾನಗಿಗಳ ನವೀಕರಣ | 3576 | 3765 | 2974 | 3844 | 2786 | 5004 |
| (ಇ) | ತಯಾರಿಕಾ ಪರವಾನಗಿಗಳ ಮಂಜೂರು | 118 | 109 | 151 | 90 | 90 | 107 |
| (ಈ) | ತಯಾರಿಕಾ ಪರವಾನಗಿಗಳ ನವೀಕರಣ | 301 | 161 | 136 | 104 | 140 | 307 |

| ಕ್ರಮ ಸಂಖ್ಯೆ | ಸಂಕ್ಷಿಪ್ತಗಳು | 88-89 | 89-90 | 90-91 | 91-92 | 92-93 | 93-94 |
|---|---|---|---|---|---|---|---|
| (ಉ) | ಪತ್ತೆಹಚ್ಚಲಾದ ಪರವಾನಗಿ ರಹಿತ ಮಾರಾಟಗಾರರ ಪ್ರಕರಣಗಳು | 117 | 54 | 46 | 37 | 31 | 34 |
| (ಊ) | ರದ್ದುಪಡಿಸುವಿಕೆ: ಅಮಾನ್ಯತೆಗೊಳಿಸುವಿಕೆ | 506 | 1098 | 1037 | 673 | 2767 | 1647 |
| (ಋ) | ಅಮಾನತ್ತುಗಳು | 46 | 187 | 131 | 229 | 187 | 321 |
| | **ಕಾನೂನು ವ್ಯವಹರಣಗಳು** | | | | | | |
| | **ವರ್ಷದ ಪ್ರಾರಂಭದಲ್ಲಿ ಇತ್ಯರ್ಥವಾಗದೇ ಉಳಿದಿದ್ದ ಕಾನೂನು ವ್ಯವಹರಣೆಗಳು :** | | | | | | |
| (ಅ) | ಔಷಧ ಮತ್ತು ಕಾಂತಿವರ್ಧಕ ಅಧಿನಿಯಮ 1940 | 84 | 88 | 96 | 112 | 120 | 97 |
| (ಅ) | ಔಷಧ (ಬೆಲೆ ನಿಯಂತ್ರಣ) ಆದೇಶ 1979:1987 | 43 | 41 | 40 | 40 | 39 | 36 |
| | **ವರ್ಷದಲ್ಲಿ ಹೂಡಲಾದ ಕಾನೂನು ವ್ಯವಹರಣೆಗಳು :** | | | | | | |
| (ಅ) | ಔಷಧ ಮತ್ತು ಕಾಂತಿವರ್ಧಕ ನಿಯಮ 1940 | 15 | 20 | 17 | 11 | 16 | 21 |
| (ಅ) | ಔಷಧ (ಬೆಲೆ ನಿಯಂತ್ರಣ) ಆದೇಶ 1979:1987 | 1 | 1 | - | 1 | 1 | 4 |
| | **ಇತ್ಯರ್ಥವಾದ ಕಾನೂನು ವ್ಯವಹರಣೆಗಳು :** | | | | | | |
| (ಅ) | ಔಷಧ ಮತ್ತು ಕಾಂತಿವರ್ಧಕ ನಿಯಮ 1940 | 11 | 12 | 1 | 3 | 39 | 12 |
| (ಅ) | ಔಷಧ (ಬೆಲೆ ನಿಯಂತ್ರಣ) ಆದೇಶ 1979:1987 | 3 | 2 | - | 2 | 4 | 4 |

| ಕ್ರಮ ಸಂಖ್ಯೆ | ಸಂಕ್ಷಿಪ್ತಗಳು | 88-89 | 89-90 | 90-91 | 91-92 | 92-93 | 93-94 |
|---|---|---|---|---|---|---|---|
| **ನಿರ್ದೋಷಿಯೆಂದು ತೀರ್ಮಾನವಾದ : ಬಿಡುಗಡೆ ಮಾಡಲಾದ ಮೊಕದ್ದಮೆಗಳು:** | | | | | | | |
| (ಅ) | ಔಷಧ ಮತ್ತು ಕಾಂತಿವರ್ಧಕ ನಿಯಮ 1940 | 8 | 8 | 1 | 2 | 22 | 9 |
| (ಆ) | ಔಷಧ (ಬೆಲೆ ನಿಯಂತ್ರಣ) ಆದೇಶ 1979:1987 | 3 | 2 | - | 1 | 4 | 2 |
| **ದೋಷಸಿದ್ಧ ಮೊಕದ್ದಮೆಗಳು :** | | | | | | | |
| (ಅ) | ಔಷಧ ಮತ್ತು ಕಾಂತಿವರ್ಧಕ ನಿಯಮ 1940 | 3 | 4 | - | 1 | 17 | 3 |
| (ಆ) | ಔಷಧ (ಬೆಲೆ ನಿಯಂತ್ರಣ) ಆದೇಶ 1979:1987 | - | - | - | 1 | - | 2 |
| | **ಆ. ಔಷಧ ಪರೀಕ್ಷಾ ಪ್ರಯೋಗಾಲಯ** | | | | | | |
| (ಅ) | ವರ್ಷದ ಪ್ರಾರಂಭದಲ್ಲಿ ಉಳಿದಿದ್ದ ಔಷಧಿ ಮಾದರಿಗಳ ಸಂಖ್ಯೆ | 801 | 435 | 828 | 528 | 693 | 1128 |
| (ಆ) | ವರ್ಷದಲ್ಲಿ ವಿಶೇಷಣೆಗೆ ಬಂದ ಮಾದರಿಗಳ ಸಂಖ್ಯೆ | 3056 | 2981 | 2521 | 2986 | 2921 | 3619 |
| (ಇ) | ಒಟ್ಟು ವಿಶ್ಲೇಷಿಸಿದ ಮಾದರಿಗಳು | 3312 | 2555 | 2649 | 2817 | 2484 | 2777 |
| (ಈ) | ಉತ್ತಮ ಗುಣಮಟ್ಟವಿರುವುದಾಗಿ ಕಂಡು ಬಂದಿರುವ ಮಾದರಿಗಳು | 2930 | 2284 | 2264 | 2558 | 2251 | 2600 |
| (ಉ) | ಉತ್ತಮಗುಣ ಮಟ್ಟವಲ್ಲದೆಂದು ಕಂಡು ಬಂದಿರುವ ಮಾದರಿಗಳು : | | | | | | |
| | 1. ಕರ್ನಾಟಕ ರಾಜ್ಯ | 209 | 48 | 176 | 168 | 158 | 143 |
| | 2. ಇತರೆ ರಾಜ್ಯಗಳು | 122 | 134 | 34 | 31 | 40 | 31 |
| | ಒಟ್ಟು | 331 | 182 | 210 | 199 | 198 | 174 |

| ಕ್ರಮ ಸಂಖ್ಯೆ | ಸಂಕ್ಷಿಪ್ತಗಳು | 88-89 | 89-90 | 90-91 | 91-92 | 92-93 | 93-94 |
|---|---|---|---|---|---|---|---|
| (ಊ) | ಭಾಗಶಃ ವಿಶ್ಲೇಷಿಸಿದ ಮಾದರಿಗಳು | 51 | 89 | 175 | 60 | 35 | 3 |
| (ಋ) | ವರ್ಷದ ಕೊನೆಯಲ್ಲಿ ವಿಶ್ಲೇಷಣೆಗೆ ಉಳಿದಿರುವ ಮಾದರಿಗಳು | 435 | 828 | 528 | 693 (4 ತಿರಸ್ಕೃತ) | 1128 (2 ತಿರಸ್ಕೃತಿ) | 1827 (143 ತಿರಸ್ಕೃತ) |

## ೩. ಫಾರ್ಮಸಿ ಶಿಕ್ಷಣ

### ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ :

### ಸ್ನಾತಕೋತ್ತರ ಫಾರ್ಮಸಿ

| | | 88-89 | 89-90 | 90-91 | 91-92 | 92-93 | 93-94 |
|---|---|---|---|---|---|---|---|
| (ಅ) | ಅಂತಿಮ ವರ್ಷದಲ್ಲಿ ಸ್ನಾತಕೋತ್ತರ ಪರೀಕ್ಷೆಯಲ್ಲಿ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 23 | 20 | 24 | 24 | 22 | 22 |
| (ಅ) | ಅಂತಿಮ ವರ್ಷದಲ್ಲಿ ಸ್ನಾತಕೋತ್ತರ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 20 | 20 | 23 | 24 | 22 | 22 |

### ಪದವಿ ಫಾರ್ಮಸಿ

| | | 88-89 | 89-90 | 90-91 | 91-92 | 92-93 | 93-94 |
|---|---|---|---|---|---|---|---|
| (ಅ) | ಅಂತಿಮ ವರ್ಷದಲ್ಲಿ ಪದವಿ ಫಾರ್ಮಸಿ ಪರೀಕ್ಷೆಯಲ್ಲಿ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 28 | 35 | 41 | 40 | 36 | 54 |
| (ಅ) | ಅಂತಿಮ ವರ್ಷದಲ್ಲಿ ಪದವಿ ಫಾರ್ಮಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 24 | 28 | 27 | 26 | 20 | 26 |

### ಡಿಪ್ಲೊಮೊ ಮಟ್ಟದ ಫಾರ್ಮಸಿ ಶಿಕ್ಷಣ

| | | 88-89 | 89-90 | 90-91 | 91-92 | 92-93 | 93-94 |
|---|---|---|---|---|---|---|---|
| (ಅ) | ಅಂತಿಮ ಡಿ. ಫಾರ್ಮಾ ಪರೀಕ್ಷೆಯಲ್ಲಿ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 65 | 90 | 78 | 96 | 68 | 85 |

| ಕ್ರಮ ಸಂಖ್ಯೆ | ಸಂಕ್ಷಿಪ್ತಗಳು | 88-89 | 89-90 | 90-91 | 91-92 | 92-93 | 93-94 |
|---|---|---|---|---|---|---|---|
| (ಆ) | ಅಂತಿಮ ಡಿ. ಫಾರ್ಮಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 24 | 36 | 27 | 38 | 38 | 38 |
| | **ಪರೀಕ್ಷಾ ಪ್ರಾಧಿಕಾರ ಮಂಡಳಿ** | | | | | | |
| (ಅ) | ಪೂರ್ವಭಾವಿ ಡಿ.ಫಾರ್ಮಾ ಪರೀಕ್ಷೆಗೆ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 10099 | 11023 | 11280 | 13607 | 14442 | 9620 |
| (ಆ) | ಪೂರ್ವಬಾವಿ ಡಿ. ಫಾರ್ಮಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 2530 | 2245 | 2571 | 2959 | 3542 | 1737 |
| (ಇ) | ಅಂತಿಮ ಡಿ.ಫಾರ್ಮ ಪರೀಕ್ಷೆಯಲ್ಲಿ ಕುಳಿತಿದ್ದ ವಿದ್ಯಾರ್ಥಿಗಳ ಸಂಖ್ಯೆ | 7103 | 7049 | 8387 | 9476 | 10094 | 8128 |
| (ಈ) | ಅಂತಿಮ ಡಿ.ಫಾರ್ಮ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಸಂಖ್ಯೆ | 2104 | 2163 | 2092 | 1591 | 2425 | 2111 |



ಕರ್ನಾಟಕ ಸರ್ಕಾರ

# ವಾರ್ಷಿಕ ವರದಿ

## 1993-94

ಜನಸಂಖ್ಯಾ ಕೇಂದ್ರ, ಬೆಂಗಳೂರು.

# ಜನಸಂಖ್ಯಾ ಕೇಂದ್ರ, ಬೆಂಗಳೂರು 1993-94ರ ವಾರ್ಷಿಕ ವರದಿ

## 1. ಪರಿಚಯ

ಜನಸಂಖ್ಯಾ ಕೇಂದ್ರದ ಮುಖ್ಯಧ್ಯೇಯವು ಸರ್ಕಾರಕ್ಕೆ ಸಹಕರಿಸಿ, ಮುಖ್ಯವಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾಕಾರ್ಯಾಲಯವು ಅನುಷ್ಠಾನಗೊಳಿಸುವಂತೆ ಆರೋಗ್ಯ ಮತ್ತು ಕುಟುಂಬಯೋಜನಾ ಕಾರ್ಯಕ್ರಮಗಳು ಪರಿಣಾಮಕಾರಿಯಾಗಿಯೂ ಮತ್ತು ಕುಶಲತೆಯಿಂದಲೂ ಆಗುವಂತೆ ನೆರವಾಗುವುದು ಮತ್ತು ತತ್ಸಂಬಂಧವಾದ ಸಂಶೋಧನಾ ಹಾಗೂ ಮೌಲ್ಯಮಾಪನ ಅಧ್ಯಯನಗಳನ್ನು ಕೈಗೊಂಡು ನಾನಾ ರೀತಿಯ ಸಿಬ್ಬಂದಿವರ್ಗದವರಿಗೂ ಮತ್ತು ಅಧಿಕಾರಿಗಳಿಗೂ ಸೇವಾನಿರತ ತರಬೇತಿ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವುದಾಗಿದೆ.

## 2. ಆಡಳಿತ

ಈ ವರದಿಯ ಕಾಲಾವಧಿಯಲ್ಲಿ ಡಾ. ಪಿ.ಹೆಚ್. ರೆಡ್ಡಿಯವರು ನಿರ್ದೇಶಕರಾಗಿರುವರು. ಈ ಅವಧಿಯಲ್ಲಿ ಯವುದೇ ಹೆಚ್ಚುವರಿ ಹುದ್ದೆಗಳು ಮಂಜೂರಾಗಿರುವುದಿಲ್ಲ, ಶ್ರೀಮತಿ ಅನಸೂಯ ಎನ್. ರಾವ್‌ರವರು ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ಹೊಂದಿದರು. ವರದಿಯ ಅವಧಿಯಲ್ಲಿ ಇಬ್ಬರು ಸಂಶೋಧನಾ ಸಹಾಯಕರು ರಾಜೀನಾಮೆ ಇತ್ತರು.

# 31.3.1994 (ಯೋಜನೇತರ)ರಲ್ಲಿದ್ದಂತೆ ಸಂಸ್ಥೆಯ ಸ್ವರೂಪ ಮತ್ತು ಸಿಬ್ಬಂದಿ ಸ್ಥಾನಗಳು

| ಕ್ರಮ ಸಂ. | ಅಧಿಕಾರಕ್ಕೆ ಅಂಕಿತವಾದುದು | ಒಟ್ಟು ಮಂಜೂರಾದ ಹುದ್ದೆಗಳು | ಒಟ್ಟು ಭರ್ತಿಯಾದ ಹುದ್ದೆಗಳು | ಗಂಡು | ಹೆಣ್ಣು | ಪರಿಶಿಷ್ಟ ಜಾತಿ | ಪರಿಶಿಷ್ಟ ಬುಡ ಕಟ್ಟು |
|---|---|---|---|---|---|---|---|
| 1. | ನಿರ್ದೇಶಕರು | 1 | 1 | 1 | - | - | - |
| 2. | ಸಹಾಯಕ ನಿರ್ದೇಶಕರು | 4 | 3 | 2 | 1 | - | - |
| 3. | ಸಂಶೋಧನಾಧಿಕಾರಿಗಳು | 7 | 2 | 2 | - | - | - |
| 4. | ಪೋಷಣಾಧಿಕಾರಿ | 1 | 1 | 1 | - | - | - |
| 5. | ಕಂಪ್ಯೂಟರ್ ಪ್ರೋಗ್ರಾಮರ್ | 1 | - | - | - | - | - |
| 6. | ಆಡಳಿತ ಮತ್ತು ಲೆಕ್ಕಾಧಿಕಾರಿ | 1 | 1 | 1 | - | - | - |
| 7. | ಸಹಾಯಕ ಸಂಶೋಧನಾಧಿಕಾರಿ | 3 | 2 | 1 | 1 | 1 | - |
| 8. | ಸಂಶೋಧನಾ ಸಹಾಯಕರು | 18 | 12 | 6 | 6 | 1 | - |
| 9. | ಸಂಶೋಧನಾ ಕ್ಷೇತ್ರತನಿಖಾಕತಖ | 4 | - | - | - | - | - |
| 10. | ಅಂಕಿಅಂಶಗಳ ಸಹಾಯಕರು | 4 | - | - | - | - | - |
| 11 | ಗ್ರಂಥಪಾಲಕರು | 1 | - | - | - | - | - |
| 12. | ಲೆಕ್ಕಪರಿಶೋಧಕರು | 1 | 1 | - | 1 | - | - |
| 13. | ಮೇಲ್ವಿಚಾರಕರು | 1 | - | - | - | - | - |
| 14. | ಪ್ರಥಮ ದರ್ಜೆಯ ಸಹಾಯಕರು | 2 | 2 | 2 | - | - | - |
| 15. | ಲೆಕ್ಕಸಹಾಯಕರು | 1 | 1 | 1 | - | 1 | - |
| 16. | ಶೀಘ್ರಲಿಪಿಗಾರರು | 2 | 2 | 1 | 1 | - | - |
| 17. | ದ್ವಿತೀಯ ದರ್ಜೆ ಸಹಾಯಕರು | 1 | 1 | 1 | — | - | - |
| 18. | ಬೆರಳಚ್ಚುಗಾರರು | 5 | 5 | 3 | 2 | - | - |
| 19. | ಚಾಲಕರು | 4 | 4 | 4 | - | 1 | - |
| 20. | 'ಡಿ' ವರ್ಗದವರು | 7 | 4 | 4 | - | 1 | 1 |
| | ಒಟ್ಟು | 69 | 42 | 30 | 12 | 5 | 1 |

## 31.3.1994 ರಲ್ಲಿದ್ದಂತೆ ಸಿಬ್ಬಂದಿ ಸ್ಥಾನ

| ಹುದ್ದೆಗಳ ವರ್ಗ | ವರ್ಷಾಂತ್ಯದಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | | | |
|---|---|---|---|---|---|
| | | ಗಂಡಸರು | ಹೆಂಗಸರು | ಪರಿಶಿಷ್ಟ ಜಾತಿ | ಪರಿಶಿಷ್ಟ ಬುಡಕಟ್ಟು |
| ಎ | 15 | 7 | 1 | - | - |
| ಬಿ | 3 | 1 | 1 | 1 | - |
| ಸಿ | 44 | 18 | 10 | 3 | - |
| ಡಿ | 7 | 4 | - | 1 | 1 |
| ಒಟ್ಟು | 69 | 30 | 12 | 5 | 1 |

3. **ಆರ್ಥಿಕ ವಿವರಗಳು**

1993-94ರ ಆಯವ್ಯಯದ ಮಂಡನೆ ಮತ್ತು ವೆಚ್ಚ

ಲೆಕ್ಕ ಶೀರ್ಷಿಕೆ ಯೋಜನೆ : " 2211 ಕುಟುಂಬ ಯೋಜನೆ 108 ಐಪಿಪಿಯೂ ಸೇರಿದಂತೆ ಆಯ್ಕೆಯಾದ ಕ್ಷೇತ್ರದ ಕಾರ್ಯಕ್ರಮಗಳು 02 ಭಾರತ ಜನಸಂಖ್ಯಾಯೋಜನೆ - 111

ಯೋಜನೇತರ " 2211 - ಕುಟುಂಬ ಯೋಜನೆ 108 ಐಪಿಪಿಯೂ ಸೇರಿದಂತೆ ಆಯ್ಕೆಯಾದ ಕ್ಷೇತ್ರ ಕಾರ್ಯಕ್ರಮಗಳು 0.1 ಭಾರತ ಜನಸಂಖ್ಯಾ ಯೋಜನೆ ಜನಸಂಖ್ಯಾ ಕೇಂದ್ರ

| ಕ್ರಮ ಸಂಖ್ಯೆ | ಬಾಬ್ತುಗಳು | ಆಯವ್ಯಯ ಹಂಚಿಕೆ 1993-94 | ವೆಚ್ಚ 1993-94 |
|---|---|---|---|
| | | ಯೋಜನೆ | - |
| | | **ಯೋಜನೇತರ** | |
| 1. | ಸಂಬಳಗಳು | ರೂ.17,02,000-00 | 12,58,418-00 |
| 2. | ತುಟ್ಟಭತ್ಯೆ | ರೂ10,56,000-00 | ರೂ.10,02,825-000 |
| 3. | ಇತರೆ ಭತ್ಯೆಗಳು | ರೂ.3,64,000-00 | ರೂ. 2,52,6663-00 |
| 4. | ಪ್ರವಾಸ ವೆಚ್ಚಗಳು | ರೂ.60,000-00 | ರೂ.42,389,-00 |
| 5. | ಕಛೇರಿ ವೆಚ್ಚ | ರೂ. 2,30,000-00 | ರೂ. 2,29,416-00 |
| 6. | ವೈದ್ಯಕೀಯ ವೆಚ್ಚಗಳು | ರೂ.25,000-00 | ರೂ.14,372-00 |
| 7. | ಮೋಟಾರ್ ವಾಹನಗಳ ವೆಚ್ಚ | ರೂ.90,000-00 | ರೂ.77,692-00 |
| | **ಒಟ್ಟು** | **ರೂ. 35,27,000-00** | **ರೂ.2 8,77,775-00** |

4. **ಪೂರ್ಣಗೊಂಡ ಅಧ್ಯಯನಗಳು**

1. **ಫಲವತ್ತತೆ, ಮರಣ ಮತ್ತು ಕುಟುಂಬ ಯೋಜನಾ ಅನುಷ್ಠಾನ**

ಕರ್ನಾಟಕ ಐಪಿಪಿ-3 ಒಂದು ತುಲನೆ (ಪರಿಷ್ಕೃತ ವರದಿ) ಕರ್ನಾಟಕದ ಐಪಿಪಿ - 3ರ ಪರಿಣಾಮದ ಬಗ್ಗೆ 1993ನೇ ವರ್ಷದ ಜನವರಿ ತಿಂಗಳಿನ 30-31ನೇ ತಾರೀಖಿನಂದು ಒಂದು ರಾಷ್ಟ್ರೀಯ ಸಮ್ಮೇಳನವು ಏರ್ಪಾಟಾಗಿತ್ತು.ಸಮ್ಮೇಳನದಲ್ಲಿ ಪಾಲ್ಗೊಂಡವರು ನೀಡಿದ ಟೀಕೆ ಮತ್ತುಸಲಹೆಗಳನ್ನಾಧರಿಸಿ ಒಂದು ಪರಿಷ್ಕೃತ ವರದಿ (ಶೀರ್ಷಿಕೆ ಮೇಲ್ಕೊಡಲಾಗಿದೆ) ಯೊಂದನ್ನು ತಯಾರಿಸಿ ಆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ.

2. **ರೇಷ್ಮೆ ಕೃಷಿಯ ಕಾರ್ಯಕರ್ತರುಗಳ ಆರೋಗ್ಯ ಸಮಸ್ಯೆಗಳು**

ಈ ಅಧ್ಯಯನದ ಉದ್ದೇಶಗಳು ಹೀಗಿವೆ.

1. ರೇಷ್ಮೆ ಕೈಗಾರಿಕೆಯಲ್ಲಿ ಕೆಲಸಗಾರರು ಎದುರಿಸಬೇಕಾದ ಆರೋಗ್ಯದ ಸಮಸ್ಯೆಗಳು ಅಂದರೆ, ರೇಷ್ಮೆ ಹುಳುವಿನ ಬೀಜೋತ್ಪತ್ತಿಯ ಕೇಂದ್ರಗಳಲ್ಲಿ ಮತ್ತು ರೇಷ್ಮೆ

ಹುಳುವಿನ ಸಾಕುವಿಕೆಯಲ್ಲಿ ತೊಡಗುವ ಕೆಲಸಗಾರರು ಮತ್ತು ರೇಷ್ಮೆಯ ನೂಲನ್ನು ಸುತ್ತುವ ಘಟಕಗಳಲ್ಲಿನ ಕೆಲಸಗಾರರು.

2. ಅಂತಹ ಸಮಸ್ಯೆಗಳನ್ನು ತಗ್ಗಿಸಲು ಕೆಲಸಗಾರರಿಂದ ಕೈಗೊಳ್ಳಲಾದ ಮುಂಜಾಗ್ರತಾ ಮತ್ತು ಸುರಕ್ಷಿತ ವಿಧಾನಗಳ ಅಧ್ಯಯನ.

ರೇಷ್ಮೆ ಹುಳುವನ್ನು ಸಾಕುವವರ ಆರೋಗ್ಯ ಸಮಸ್ಯೆಗಳನ್ನು ಅಧ್ಯಯನ ಮಾಡಲು ರಾಮನಗರಂ ಬಳಿ ಇರುವ ಐದು ಹಳ್ಳಿಗಳನ್ನು ಆಯ್ಕೆಮಾಡಿ, ಅವುಗಳಲ್ಲಿನ ರೇಷ್ಮೆ ಹುಳುವನ್ನು ಸಾಕುವ ಕೆಲಸ ಮಾಡುತ್ತಿರುವ ಒಂದುನೂರು ಮಂದಿಯನ್ನು ಅಧ್ಯಯನಕ್ಕೆ ಮಾದರಿಯಾಗಿ ಆಯ್ಕೆ ಮಾಡಲಾಯಿತು. ನಿಯಂತ್ರಣ ಗುಂಪಿಗಾಗಿ ಅದೇ ಹಳ್ಳಿಗಳಲ್ಲಿ ಬೇರೆ ಬೇರೆ ಕಾರ್ಯಚಟುವಟಿಕೆಗಳಲ್ಲಿ ನಿರತರಾಗಿರುವ ಐವತ್ತು ಮಂದಿಯನ್ನು ಆಯ್ಕೆ ಮಾಡಲಾಯಿತು. ಇದರ ಜೊತೆಗೆ ಐವತ್ತು ಮಂದಿ ರೇಷ್ಮೆಯ ಮೊಟ್ಟೆಯ ಕೇಂದ್ರಗಳಲ್ಲಿ ಕೆಲಸಮಾಡುವವರನ್ನೂ ಮತ್ತು ಎಂಭತ್ತು ಮಂದಿ ರಾಮನಗರದಲ್ಲಿನ ನೂಲು ಸುತ್ತುವ ಬೇರೆಬೇರೆ ಘಟಕಗಳಿಂದಲೂ ಆಯ್ಕೆ ಮಾಡಲಾಯಿತು. ಈ ಸಂಬಂಧವಾದ ಕ್ಷೇತ್ರ ಕಾರ್ಯವನ್ನು 1992ರ ಜೂನ್ ತಿಂಗಳಿನಲ್ಲಿ ಕೈಗೊಂಡು, ಸಂಗ್ರಹವಾದ ಮಾಹಿತಿಯನ್ನಾಧರಿಸಿದ ವರದಿಯನ್ನು ತಯಾರಿಸಿ ಅದನ್ನು ಸರ್ಕಾರಕ್ಕೆ ಸಲ್ಲಿಸಲಾಯಿತು.

ಈ ಅಧ್ಯಯನವು ಸೂಚಿಸಿದುದೇನೆಂದರೆ, ಶೇಕಡ 14ರಷ್ಟು ರೇಷ್ಮೆ ಹುಳುಗಳನ್ನು ಸಾಕುವ ಕಾರ್ಯಕರ್ತರು, ಶೇಕಡಾ 28 ರಷ್ಟು ಮೊಟ್ಟೆಮಳಿಗೆಯ ಕಾರ್ಯಕರ್ತರು ಮತ್ತು ಶೇಕಡಾ 32.50 ರಷ್ಟು ರೇಷ್ಮೆ ನೂಲನ್ನು ಸುತ್ತುವ ಕೆಲಸಗಾರರು ಶೇಕಡಾ 12 ಮಂದಿ ನಿಯಂತ್ರಿತ ಗುಂಪಿನವರ ವಿರುದ್ಧ ಆರೋಗ್ಯದ ಸಮಸ್ಯೆಗಳನ್ನೆದುರಿಸುತ್ತಿದ್ದಾರೆ. ರೇಷ್ಮೆ ಮೊಟ್ಟೆ ಮಳಿಗೆಗಳಲ್ಲಿ ಕೆಲಸಮಾಡುವವಲ್ಲಿ ಶ್ವಾಸಕೋಶಕ್ಕೆ (ಉಸಿರಾಟದ) ಸಂಬಂಧಿಸಿದ ಆರೋಗ್ಯ ಸಮಸ್ಯೆ ಹೊಂದಿದವರು ಪ್ರಮುಖರಾಗಿದ್ದಾರೆ. ಆದರೆ, ರೇಷ್ಮೆ ನೂಲನ್ನು ಸುತ್ತುವ ಕೆಲಸಗಾರರಲ್ಲಿ ಶ್ವಾಸಕೋಶಕ್ಕೆ ಸಂಬಂಧಿಸಿದ ಮತ್ತು ಚರ್ಮ ರೋಗ ಸಮಸ್ಯೆಗಳೂ ಕೂಡಾ ವ್ಯಕ್ತವಾದುದು. ಅವರುಗಳ ಕೈಗೊಂಡಿದ್ದಂತಹ ಸುರಕ್ಷ ಮತ್ತು ಮುಂಜಾಗ್ರತಾ ಕ್ರಮಗಳು ತೃಪ್ತಿಕರವಾಗಿರಲಿಲ್ಲ.'

**3. ಶೀಘ್ರವಾಗಿ ಬೆಳೆಯುತ್ತಿರುವ ರಾಜಧಾನಿಯ ಪರಿಣಾಮಕಾರಿಗಳು ಬೆಂಗಳೂರು ನಗರದ ಬಗ್ಗೆ ಒಂದು ವಿಶೇಷ ಅಧ್ಯಯನ**

ಬೆಂಗಳೂರು ನಗರವು ತ್ವರಿತಗತಿಯಿಂದ ಬೆಳೆಯುತ್ತಿರುವುದರ ಪರಿಣಾಮವನ್ನು ಪರೀಕ್ಷಿಸುವ ಸಲುವಾಗಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಅಧ್ಯಯನದಲ್ಲಿ ವಿವಿಧ ಅಂಶಗಳು ಅಂದರೆ ಜನಸಂಖ್ಯಾ ರೂಪು ರೇಷೆ, ಜನಸಂಖ್ಯಾ ಸ್ವರೂಪ, ಕೈಗಾರಿಕೆಗಳು ವಸತಿ, ನೀರಿನ ಸೌಲಭ್ಯಗಳು ಮತ್ತು ಪೂರೈಕೆ, ಕಲ್ಮಷಗಳ ಸಾಗಾಣಿಕೆ, ವಿದ್ಯುತ್ ರಸ್ತೆ ಮತ್ತು ಸಾರಿಗೆ ಆರೋಗ್ಯ ಸೌಲಭ್ಯಗಳ ರಚನೆ, ಶೈಕ್ಷಣಿಕ ಸೌಲಭ್ಯಗಳು,ಕೊಳಚೆ ಪ್ರದೇಶಗಳು, ಅಪರಾಧಗಳು, ರಸ್ತೆ ಅಪಘಾತಗಳು, ವಾಯು ಮಾಲಿನ್ಯ ಮುಂತಾದವುಗಳು ಒಳಗೊಂಡಿದೆ. ಈ ಅಧ್ಯಯನವು ಸಂಬಂಧಿಸಿದ ವಿವಿಧ ಇಲಾಖೆಗಳಲ್ಲಿ ಲಭ್ಯವಿರುವ ದ್ವಿತೀಯ ಬಗೆಯ ಮಾಹಿತಿಗಳ ಆಧಾರದ ಮೇಲೆ ರಚಿತವಾಗಿದೆ. ಈ ಅಧ್ಯಯನವು

ಸೂಚಿಸಿದುದೇನೆಂದರೆ - ನಗರವು ಕಾಲ ಕ್ರಮೇಣ, ಹಿಂದೆಂದೂ ಕಾಣದಂತಹ ಜನಸಂಖ್ಯಾ ಬೆಳವಣಿಗೆಯನ್ನು ಹೊಂದಿರುವುದು, ಇದಕ್ಕೆ ಮುಖ್ಯವಾದ ಕಾರಣವೇನೆಂದರೆ, ತ್ವರಿತಗತಿಯಿಂದ ಉಂಟಾದ ಕೈಗಾರಿಕೀಕರಣದಿಂದಾಗಿ ಹೊರಗಿನಿಂದ ವಲಸೆ ಬಂದಿರುವ ಜನಸಂಖ್ಯೆಯಿಂದಾಗಿದೆ. ಇದರಿಂದಾಗಿ, ನಾಗರೀಕ ಸೌಲಭ್ಯಗಳ ಮೇಲೆ ಇದರ ಒತ್ತಡವು ಅಪಾರವಾಗಿದ್ದು ಅದರಿಂದಾಗಿ ಜೀವನ ಗುಣಮಟ್ಟದಲ್ಲಿ ಕ್ಷೀಣಸ್ಥಿತಿಯನ್ನು ತಲುಪಿದೆ. ಮತ್ತಷ್ಟು ಜೀವನದ ಮಟ್ಟವು ಕ್ಷೀಣಿಸುವುದನ್ನು ತಪ್ಪಿಸಲು ಮತ್ತು ನಗರವು ಯದ್ವಾತದ್ವಾ ಬೆಳೆಯುವುದನ್ನು ತಡೆಗಟ್ಟಲು, ಈ ಅಧ್ಯಯನವು ಕೈಗಾರಿಕೆಯ ಬೆಳವಣಿಗೆಯ ಬಗ್ಗೆ ಸೂಕ್ತವಾದ ಅಯೋಜನೆಯನ್ನು ಸೂಚಿಸಿದೆ.

**4. ಶಿಶು ಮರಣವನ್ನು ತಗ್ಗಿಸುವಿಕೆ ಕರ್ನಾಟಕಕ್ಕೆ ಕೆಲವು ನೀತಿ ಮಾರ್ಗಗಳು**

ಭಾರತ ಹಾಗೂ ಕರ್ನಾಟಕಗಳಿಗೆ ಶಿಶು ಉಳಿವಿನ ಮೇಲೆ ಪರಿಣಾಮ ಬೀರಬಹುದಾದಂತಹ ಕ್ಲಿಷ್ಟ ಅಂಶಗಳ ಪುನರ್ವಿಮರ್ಷಿತ ಆಧಾರದ ಮೇಲೆ ಮತ್ತು ಶಿಶು ಮರಣದ ಬೆಳವಣಿಗೆಯಾಗುವುದೆಂಬುದನ್ನು ಪರೀಕ್ಷಿಸುವಲ್ಲಿ ಕರ್ನಾಟಕದಲ್ಲಿ ಶಿಶು ಮರಣದ ಪ್ರಮಾಣವನ್ನು ತಡೆಗಟ್ಟುವ ಸಲುವಾಗಿ ಕೆಲವು ಹೊಸ ಮಾರ್ಗಗಳನ್ನು ಸೂಚಿಸಲು ಈ ಅಧ್ಯಯನವನ್ನು ಸದ್ಯದಲ್ಲಿ ಅನುಷ್ಠಾನದಲ್ಲಿರುವ ಶಿಶು ಉಳಿವು ಮತ್ತು ಸುರಕ್ಷಿತ ತಾಯ್ತನದ ಕಾರ್ಯಕ್ರಮವನ್ನು ಗಮನದಲ್ಲಿರಿಸಿಕೊಂಡು ಕೈಗೊಳ್ಳಲಾಗಿದೆ. ಸೂಚಿಸಲ್ಪಟ್ಟ ಹೊಸ ಮಾರ್ಗಗಳು ಈ ಕೆಳಕಂಡಂತಿವೆ.

1. ಮಕ್ಕಳಿಗಾಗಿ ಸಂಚಾರೀ ಚಿಕಿತ್ಸಾಲಯಗಳು ( ಬಹಳ ದೂರದಲ್ಲಿರುವ ಹಳ್ಳಿಗಳಿಗಾಗಿ)
2. ಗರ್ಭಿಣಿ ಸ್ತ್ರೀಯರಿಗೆ ಉಪಯೋಗಿಸಿದನಂತರ ವಿಸರ್ಜಿಸಬಹುದಾದ ಹೆರಿಗೆಯ ಚೀಲಗಳ ವಿತರಣೆ.
3. ತಾಯಿಮಕ್ಕಳ ಆರೋಗ್ಯದ ಫಲಾನುಭವಿಗಳಿಗೆ ತಾಯಿ ಮಕ್ಕಳ ಆರೋಗ್ಯದ ಚೀಟಿಯನ್ನು ಕೊಡುವುದು.
4. ಬಸ್‌ಗಳ ಮೇಲೆ ರೋಗವಿರುದ್ಧ ಲಸಿಕೆನೀಡುವ ಬಗ್ಗೆ ಘೋಷಣೆಗಳನ್ನು ಪ್ರಕಟಿಸುವುದು.
5. ಮಹಿಳಾ ಮಂಡಲಿಗಳ ಕಛೇರಿಗಳಲ್ಲಿ ತಾಯಿ ಮಕ್ಕಳ ಆರೋಗ್ಯದ ಬಗ್ಗೆ ಭಿತ್ತಿ ಪತ್ರಗಳನ್ನು ಪ್ರಕಟಿಸುವುದು.
6. ಸಾಂಪ್ರದಾಯಿಕ ದಾದಿ, ಸೂಲಗಿತ್ತಿಯರಿಗೆ ಸೂಕ್ತವಾದ ಸಂಭಾವನೆಯನ್ನು ನೀಡಿ ಘಟನೆಗಳನ್ನು ನೊಂದಾಯಿಸುವುದು.

ಈ ಮಾರ್ಗಗಳು, ಶಿಶು ಉಳಿವು ಮತ್ತು ಸುರಕ್ಷಿತ ತಾಯ್ತನದ ಕಾರ್ಯಕ್ರಮದೊಂದಿಗೆ ಇನ್ನೈದು ವರ್ಷಗಳಲ್ಲಿ ಕರ್ನಾಟಕದಲ್ಲಿನ ಶಿಶು ಮರಣಗಳ ಪ್ರಮಾಣವನ್ನು ಪ್ರತಿ 1000 ಜೀವಂತ ಜನನಗಳಿಗೆ 70 ರಷ್ಟರಿಂದ 40ಕ್ಕೆ ಕಡಿಮೆ ಮಾಡುವುದಾಗಿ ನಿರೀಕ್ಷಿಸಲಾಗಿದೆ. ಕರ್ನಾಟಕದಲ್ಲಿ ಈ ಹೊಸ ಮಾರ್ಗಗಳನ್ನು ಇನ್ನು ಐದು ವರ್ಷಗಳಲ್ಲಿ ಅನುಷ್ಠಾನಗೊಳಿಸಿ, ಹಾಗೂ ಮೌಲ್ಯ ಮಾಪನ (ತುಲನೆ) ಮಾಡಲು ತಗಲುವ ವೆಚ್ಚವು 1288

ಲಕ್ಷರೂಪಾಯಿಗಳೆಂಬುದಾಗಿ ಅಂದಾಜು ಮಾಡಲಾದ ಅಧಿಕ ಮೌಲ್ಯವಾಗಿದೆ.ಇದೇ ರೀತಿಯ ವಿಧಾನ (ಮಾರ್ಗ)ಗಳನ್ನು ಎಲ್ಲೆಲ್ಲಿ ಶಿಶು ಮರಣ ಪ್ರಮಾಣವು ಅಧಿಕವಾಗಿರುವುದೋ ಅಂತಹ ರಾಜ್ಯಗಳಲ್ಲೂ ಅನುಷ್ಠಾನಗೊಳಿಸಲು ಪರಿಗಣಿಸಬಹುದು.

### 5. ಲೆಪರೋಸ್ಕೋಪಿಕ್ (ಉದರ ದರ್ಶಕ) ಟ್ಯೂಬೆಕ್ಟಮಿಯ ಬೇಡಿಯು ಇಳಿಮುಖವಾಗಿರುವುದಕ್ಕೆ ಕಾರಣಗಳು. ಒಂದು ಅಧ್ಯಯನ

ಕರ್ನಾಟಕದಲ್ಲಿ ಉದರ ದರ್ಶನ ಮಹಿಳೆಯರ ಸಂತಾನಹರಣ ಶಸ್ತ್ರಕ್ರಿಯೆಗೆ ಬೇಡಿಕೆಯು ಇಳಿಮುಖವಾಗಿರುವುದಕ್ಕೆ ಕಾರಣಗಳನ್ನು ಕಂಡುಹಿಡಿಯುವ ಸಲುವಾಗಿ ಈ ಅಧ್ಯಯನವನ್ನು ಕೈಗೊಳ್ಳಲಾಯಿತು. ನಾಲ್ಕು ಜಿಲ್ಲೆಗಳಿಂದ ಆಯ್ಕೆಯಾದ 1221 ಸಂತಾನ ಹರಣಶಸ್ತ್ರ ಕ್ರಿಯೆಯನ್ನು ಅಳವಡಿಸಿಕೊಂಡವರನ್ನು ಸಂದರ್ಶಿಸಿ ಆಧಾರದ ಮೇಲೆ ಈ ಅಧ್ಯಯನವು ಕೈಗೊಂಡಿದೆ. ಉದರ ದರ್ಶಕ ಶಸ್ತ್ರಕ್ರಿಯೆಯನ್ನು ಅಳವಡಿಸಿಕೊಳ್ಳದೇ ಹೋಗಲು ಕಾರಣಗಳೇನೆಂದರೆ(1) ಈ ವಿಧಾನವು ಫಲಕಾರಿಯಾಗದು ಎಂಬ ಭಯದಿಂದ, (2) ವಿದ್ಯುತ್ ಶಕ್ತಿಯ ಬಗ್ಗೆ ಇರುವ ತಪ್ಪಭಿಪ್ರಾಯಗಳಿಂದ, (3) ಗರ್ಭನಾಳಗಳ ತಪ್ಪು ಗ್ರಹಿಕೆಯಿಂದಾಗಿ, (4) ಕೆಳಮಟ್ಟದ ಬ್ಯಾಂಡ್‌ಗಳನ್ನು ಉಪಯೋಗಿಸಿದ್ದರಿಂದ, (5) ಉದರ ದರ್ಶಕ ಚಿಕಿತ್ಸೆಗೆ ಮುನ್ನ ಮಾಡಿದ ಅಸಮರ್ಪಕ ಪರೀಕ್ಷೆಯಿಂದಾಗಿ ಮತ್ತು (6) ನುರಿತ ವೈದ್ಯಕೀಯ ತಂಡದ ಅಭಾವದಿಂದ.

### 6. 1951-91ರಲ್ಲಿ ಕರ್ನಾಟಕ ರಾಜ್ಯದಲ್ಲಿನ ಜಿಲ್ಲೆಗಳಲ್ಲಿ ಪ್ರಮುಖ ಘಟನೆಗಳ ಪ್ರಮಾಣಗಳ ಅಂದಾಜು

ವಿವಿಧ ಜನಗಣತಿಗಳಿಂದ ಸಂಗ್ರಹಿಸಲಾದ ಜನಸಂಖ್ಯಾ ಮಾಹಿತಿಗಳನ್ನಾಧರಿಸಿ ಜನನ ಪ್ರಮಾಣ, ಮರಣ ಪ್ರಮಾಣ ಸ್ವಾಭಾವಿಕವಾದ ಹೆಚ್ಚಳ ಹಾಗೂ ನಿವ್ವಳ ವಲಸೆಯ ಗಾತ್ರದ ಅಂದಾಜನ್ನು ಅಪ್ರತ್ಯಕ್ಷ ವಿಧಾನಗಳಲ್ಲಿ ಕರ್ನಾಟಕದ 19ಜಿಲ್ಲೆಗಳಲ್ಲಿ 1951 ರಿಂದ 1991ರ ವರೆಗೆ, ಅಂದಾಜು ಮಾಡಲು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅಂತಹ ಅಪ್ರತ್ಯಕ್ಷ ವಿಧಾನಗಳ ಅಂದಾಜು ಮಾಡುವಲ್ಲಿ ಅಗತ್ಯವಾದಂತಹ ಊಹೆಗಳನ್ನಾಧರಿಸಬೇಕಾಗಿರುವುದರಿಂದಾಗಿ ಈ ಅಂದಾಜುಗಳು, ಸ್ವಲ್ಪ ಪರಿಮಿತಿಯನ್ನು ಹೊಂದಿವೆ. ಹೇಗಾದರೂ ಸಹ 1951ರಿಂದೀಚೆಗೆ ಕರ್ನಾಟಕದಲ್ಲಿನ ವಿವಿಧ ಜಿಲ್ಲೆಗಳಲ್ಲಿನ ಫಲವತ್ತತೆ ಮತ್ತು ಮರಣಗಳ ಪ್ರವೃತ್ತಿಯನ್ನರಿಯಲು ಅವುಗಳು ಬಹಳ ಉಪಯುಕ್ತವಾಗಿವೆ. ಜಿಲ್ಲಾ ಮಟ್ಟದಲ್ಲಿ ಜನಸಂಖ್ಯೆಯ ಬೆಳವಣಿಗೆಯಲ್ಲಿ ವಲಸೆಯ ಪಾತ್ರವು ಬಹಳ ಮಹತ್ತರವಾದುದೆಂಬುದನ್ನು ಈ ಅಂದಾಜು ಸೂಚಿಸುವುದು. 1951-91ರಲ್ಲಿ ಜನನ ಪ್ರಮಾಣ ಹಾಗೂ ಮರಣ ಪ್ರಮಾಣಗಳಲ್ಲಿ ಬಹಳಷ್ಟು ಜಿಲ್ಲೆಗಳಲ್ಲಿ ಸಾಕಷ್ಟು ಇಳಿತವು ಕಂಡು ಬಂದಿದ್ದಾಗ್ಯೂ ಪ್ರಸ್ತುತ ಫಲವತ್ತತೆ ಮತ್ತು ಮರಣ ಮಟ್ಟವು ಬಹಳಷ್ಟು ಜಿಲ್ಲೆಗಳಲ್ಲಿ (ಮಿತ) ಮಧ್ಯಮತೆರನಾಗಿದೆ.

## 7. ಕರ್ನಾಟಕ ರಾಜ್ಯದ ಕೋಲಾರ ಜಿಲ್ಲೆಯಲ್ಲಿ ಸೋಂಕಿನ ವಿರುದ್ಧ ರಕ್ಷಣೆ ನೀಡಿರುವುದರ ವ್ಯಾಪಕತೆಯ ಬಗ್ಗೆ ಒಂದು ಮೌಲ್ಯಮಾಪನ ಸಮೀಕ್ಷೆ

1985-86ರಲ್ಲಿ ಕರ್ನಾಟಕದಲ್ಲಿನ ಎರಡು ಜಿಲ್ಲೆಗಳಲ್ಲಿ ಅಂದರೆ ಹಾಸನ ಮತ್ತು ಕೋಲಾರಗಳಲ್ಲಿ ಸಾರ್ವತ್ರಿಕ ರೋಗ ವಿರುದ್ಧ ರಕ್ಷಣಾ ಕಾರ್ಯಕ್ರಮವನ್ನು ಪರಿಚಯಿಸಲಾಯಿತು. ಮತ್ತು ಈ ಕಾರ್ಯಕ್ರಮವನ್ನು ನಂತರ ಇತರ ಜಿಲ್ಲೆಗಳಿಗೂ ವಿಸ್ತರಿಸಲಾಯಿತು.ವಿವಿಧ ರೀತಿಯ ಲಸಿಕೆ ನೀಡುವಿಕೆ ಹಾಗೂ ಅವುಗಳನ್ನು ಎಷ್ಟರ ಮಟ್ಟಿಗೆ ಸಂಪೂರ್ಣವಾಗಿ ನೀಡಲಾಗಿದೆ ಎಂಬುದರ ಬಗ್ಗೆ ಕಂಡುಹಿಡಿಯಲು ಕೋಲಾರ ಜಿಲ್ಲೆಯಲ್ಲಿ ಒಂದು ಮೌಲ್ಯ ಮಾಪನ ಸಮೀಕ್ಷೆಯನ್ನು ಕೈಗೊಳ್ಳಲಾಯಿತು. ಈ ಸಮೀಕ್ಷೆಯಲ್ಲಿ ಜನನ ಮತ್ತು ಮರಣಗಳ ಪ್ರಮಾಣಗಳು, ತಾಯಿಯ ಆರೋಗ್ಯ ಆರೈಕೆ, ತೀವ್ರವಾದ ಶ್ವಾಸಕೋಶದ ರೋಗ ಹಾಗೂ ಅದರ ನಿರ್ವಹಣೆ, ಅತಿಸಾರ ಭೇದಿಯ ಖಾಯಿಲೆಗಳು ಮತ್ತು ನಿರ್ವಹಣೆ, ಹಾಗೂ ಕುಟುಂಬ ಯೋಜನಾ ವಿಧಾನಗಳ ಅನುಸರಣೆ ಮೊದಲಾದ ಅಂಶಗಳ ಬಗ್ಗೆ ಮಾಹಿತಿಯನ್ನು ಪಡೆಯಲು ಒಂದು ಪ್ರಯತ್ನವನ್ನು ಮಾಡಲಾಗಿದೆ. ಈ ಅಧ್ಯಯನದಲ್ಲಿ "ಲಸಿಕೆ ವ್ಯಾಪಕತೆಯ ಮೌಲ್ಯಮಾಪನ" ಎಂಬ ಮಾದರಿಯಲ್ಲಿ ವಿವರಿಸಿರುವ ದಿ ಕ್ಲಸ್ಟರ್ ಸ್ಯಾಂಪ್ಲಿಂಗ್ ಟೆಕ್ನಿಕ್ (ಗುಂಪು ಮಾದರಿಯ ತಂತ್ರ) ಎಂಬ ಮಾನವನ್ನು ಅಳವಡಿಸಲಾಗಿದೆ.

ಈ ಅಧ್ಯಯನವು ಪ್ರತಿ 1000 ಜೀವಂತ ಜನನಗಳಿಗೆ 37.3ರಷ್ಟು ನವಜಾತ ಶಿಶು ಮರಣವನ್ನೂ ಮತ್ತು ಪ್ರತಿ 1000 ಜೀವಂತ ಜನನಗಳಿಗೆ 70.6 ರಷ್ಟು ಹಸುಗೂಸುಗಳ ಮರಣ ದರವನ್ನು ಸೂಚಿಸಿತು. ಮಕ್ಕಳ ಮರಣದ ಪ್ರಮಾಣವು 0-5 ವರ್ಷ ವಯಸ್ಸಿನವರಲ್ಲಿ ಪ್ರತಿ 1000 ಜನಸಂಖ್ಯೆಗೆ 42.5 ರಷ್ಟಿತ್ತು. ಮಾತೆಯರ ಮರಣವು 1,00,000 ಜೀವವಂತ ಜನನಗಳಿಗೆ 533 ರಷ್ಟಿತ್ತು.

ಶೇಕಡಾ 80ರಷ್ಟು ಅಧಿಕ ಪ್ರಮಾಣದ ಮಕ್ಕಳು ಸಂಪೂರ್ಣವಾಗಿ ರೋಗ ವಿರುದ್ಧ ಸೋಂಕು ತಟ್ಟದಂತೆ ರಕ್ಷಣೆ ಪಡೆದರು. ಸುಮಾರು ಶೇಕಡಾ 7 ರಷ್ಟು ಮಕ್ಕಳು ಡಿ.ಪಿ.ಟಿ.1 ಮತ್ತು ಡಿ.ಪಿ.ಟಿ.2ರ ನಡುವೆ (ಗಂಟಲುಮಾರಿ, ನಾಯಿಕೆಮ್ಮು ಮತ್ತು ಧನುರ್ವಾಯುವಿನ ವಿರುದ್ಧ ನೀಡುವ ಮೊದಲ ಮತ್ತು ಎರಡನೆಯ ಸುತ್ತಿನ ಲಸಿಕೆಯನ್ನು ಪಡೆಯುವಿಕೆ) ಬಿಟ್ಟು ಹೋದರು, ಮತ್ತು ಡಿ.ಪಿ.ಟಿ. 2 ಮತ್ತು 3 ರ ನಡುವೆ ಶೇಕಡಾ 1ರಷ್ಟು ಮತ್ತು ಡಿ.ಪಿ.ಟಿ.1 ಮತ್ತು 3 ರ ನಡುವೆ ಶೇಕಡಾ 8 ರಷ್ಟು ಮಕ್ಕಳು ಬಿಟ್ಟು ಹೋದರು. ಇದೇ ರೀತಿ, ಶೇಕಡಾ 7 ರಷ್ಟು ಮಕ್ಕಳು ಒ.ಪಿ.ವಿ 1ಮತ್ತು ಒ.ಪಿ.ವಿ.2 (ಬಾಯಲ್ಲಿ ಸೇವಿಸುವ ನರಮಜ್ಜೆ ಲಸಿಕೆ) ರ ನಡುವೆಯೂ ಮತ್ತು ಒ.ಪಿ.ವಿ. 2,3 ರ ನಡುವೆ ಶೇಕಡಾ 2ರಷ್ಟು ಮಕ್ಕಳೂ ಮತ್ತು ಒ.ಪಿ.ವಿ.1 ಮತ್ತು ಒ.ಪಿ.ವಿ. 3ರ ನಡುವೆ ಸುಮಾರು ಶೇಕಡಾ 9 ರಷ್ಟು ಮಕ್ಕಳೂ ಬಿಟ್ಟು ಹೋಗಿದ್ದರು.

ಎಲ್ಲಾ ಬಗೆಯ ಲಸಿಕೆ ನೀಡುವಿಕೆಯೂ ಹೆಚ್ಚು ಕಡಿಮೆ ಸರಿಯಾದ ವಯಸ್ಸಿನಲ್ಲಿಯೇ ಕೊಡಲ್ಪಟ್ಟಿತು. ಬಹುತೇಕ ಎಲ್ಲಾ ಮಕ್ಕಳಿಗೂ ಪ್ರಾಥಮಿಕ ಲಸಿಕೆ ನೀಡುವಿಕೆಯು ಸಕಾಲಕ್ಕೇ ಪೂರ್ಣಗೊಂಡಿತ್ತು. ದಡಾರದ ಲಸಿಕೆ ನೀಡುವ ಕಾರ್ಯಕ್ರಮದ ಬಗ್ಗೆ ಮಾಹಿತಿಯನ್ನು ಅಂದರೆ,



5981-8

ದರ ಅಗತ್ಯತೆ ಮತ್ತು ಪ್ರಾಮುಖ್ಯತೆಯ ಬಗ್ಗೆ ವಿಚಾರವನ್ನು ತಿಳಿಸಬೇಕಾದ ಅಗತ್ಯವು ಕಂಡು ಬಂದಿದೆ.

ಸುಮಾರು ಶೇಕಡ 85ರಷ್ಟು ತಾಯಂದಿರು ಟಿ.ಟಿ. (ಧನುರ್ವಾಯುವಿನ ವಿರುದ್ಧ ರಕ್ಷಣೆ) ಯ 2ನೆಯ ಸುತ್ತನ್ನು ಪಡೆದಿದ್ದರು. ಸುಮಾರು ಶೇಕಡಾ 82ರಷ್ಟು ಮಂದಿ ಮಹಿಳೆಯರು ತಾವುಗಳು ಪಡೆದಷ್ಟು ಪ್ರಮಾಣದ ಕಬ್ಬಿಣ ಮತ್ತು ಫೋಲಿಕ್ ಆಮ್ಲದ ಮಾತ್ರೆಗಳನ್ನು ಸೇವಿಸಿದ್ದರು. ಹೆರಿಗೆಗಳಲ್ಲಿ ಸುಮಾರು ಶೇ.81.1 ರಷ್ಟು ಆರೋಗ್ಯ ಕೇಂದ್ರಗಳಲ್ಲಾಗಿತ್ತು. ಸುಮಾರು ಶೇಕಡಾ 21ರಷ್ಟು ಹೆರಿಗೆಗಳನ್ನು ತರಬೇತಿ ಪಡೆದ ದಾದಿಯರು ಮಾಡಿದ್ದರು ಮತ್ತು ಶೇಕಡಾ ಸುಮಾರು 15ರಷ್ಟು ಹೆರಿಗೆಗಳು ತರಬೇತಿ ಹೊಂದದ ದಾದಿಯರಿಂದ ಮಾಡಲ್ಪಟ್ಟಿದ್ದುವು.

## 8. ವಿವಾಹವಾಗುವಲ್ಲಿನ ವಯಸ್ಸು ಮತ್ತು ಫಲವತ್ತತೆ-ಸಂಬಂಧಿಸಿದ ಸಾಹಿತ್ಯದ ಪುನರ್ವಿಮರ್ಶೆ

ವಿವಾಹದ ವಯಸ್ಸು ಮತ್ತು ಫಲವತ್ತತೆಯ ಬಗ್ಗೆ ಪುನರ್ವಿಮರ್ಶೆಯು ವರದಿಯ ಅವಧಿಯಲ್ಲಿ ಪೂರ್ಣಗೊಂಡಿತು. ಈ ಅಧ್ಯಯನವು (ಅ) ಮದುವೆಯ ವಯಸ್ಸು ಮತ್ತು ಜೈವಿಕ ಪರಿಗಣನೆಗಳು, (ಆ) ಮದುವೆಯ ವಯಸ್ಸು ಮತ್ತು ಸಾಮಾಜಿಕ -ಆರ್ಥಿಕ ಪರಿಗಣನೆಗಳು ಮತ್ತು (ಇ) ಮದುವೆಯ ವಯಸ್ಸು ಮತ್ತು ಫಲವತ್ತತೆ ಈ ಅಂಶಗಳನ್ನು ಒಳಗೊಂಡಿತ್ತು. ಈ ಅಧ್ಯಯನದಿಂದ ಕಂಡುಬಂದ ಪ್ರಮುಖ ಅಂಶಗಳು ಈ ಕೆಳಕಾಣಿಸಿದಂತಿವೆ.

1. 20 ವರ್ಷಗಳಿಗಿಂತಾ ಕಡಿಮೆ ವಯಸ್ಸಿನ ತಾಯಿಂದಿರಿಗೆ ಜನಿಸಿದ ಹಸುಳೆಗಳ ಮರಣದ ಪ್ರಮಾಣವು ಅಧಿಕವಾಗಿದೆ.
2. ಶಿಕ್ಷಣ (ಮುಖ್ಯವಾಗಿ ಮಹಿಳೆಯರ) ನಿಧಾನಿಸಿದ ವಿವಾಹದ ಹಾಗೂ ಕಡಿಮೆ ಫಲವತ್ತತೆಗೆ ಕಾರಣವಾದ ಮುಖ್ಯವಾದ ಒಂದೇ ಕಾರಣವಾಗಿ ಕಂಡುಬಂದಿದೆ.
3. ಗ್ರಾಮಾಂತರ ಪ್ರದೇಶಗಳಲ್ಲಿ ಮುಖ್ಯವಾಗಿ ಪರಸ್ಪರ ಅತ್ಯಧಿಕ ಫಲವತ್ತತೆ ಕಂಡು ಬರುವೆಡೆಗಳಲ್ಲಿ ಚಿಕ್ಕವಯಸ್ಸಿನಲ್ಲೇ ಮದುವೆಯಾಗುವಿಕೆಯು ಇನ್ನೂ ಮುಂದುವರಿದೆದೆ.
4. ನಿಧಾನವಾಗಿ ಮದುವೆಯಾಗುವುದರಿಂದ ತಾನಾಗಿಯೇ ಫಲವತ್ತತೆ ಕಡಿಮೆ ಎಂಬನಂಬಿಕೆ ಯಾವಾಗ್ಲೂ ನಿಜವೆಂಬುದೇನೂ ಇಲ್ಲ, ಎಲ್ಲಕ್ಕಿಂತಲೂ ಹೆಚ್ಚಾಗಿ ಗರ್ಭನಿರೋಧಕಗಳ ಬಳಕೆಯು ಜಾರಿಯಲ್ಲಿರುವಾಗ, ಆದ್ದರಿಂದ, ಈ ಸಂಬಂಧವಾಗಿ ಗರ್ಭನಿರೋಧಗಳ ಬಳಕೆಯಿಂದ ಫಲವತ್ತತೆಯ ಮೇಲಾಗುವ ಪರಿಣಾಮಗಳ ಬಗ್ಗೆಮದುವೆಯ ವಯಸ್ಸಿನಲ್ಲಿನ ಬದಲಾವಣೆಗಳ ಬಗ್ಗೆ ಮತ್ತು ಜನಸಂಖ್ಯೆಯಲ್ಲಿನ ವಯಸ್ಸು ಮತ್ತು ಲಿಂಗ ಪರಿಮಾಣದ ಬಗ್ಗೆ ಉಂಟಾಗಬಹುದಾದ ಬದಲಾವಣೆಗಳ ಕುರಿತಾಗಿ ಅಧ್ಯಯನ ಮಾಡಲು ಅಗತ್ಯತೆ ಇದೆ.

5. 1994ನೇ ಮಾರ್ಚ್ ಅಂತ್ಯದ ವೇಳೆಗೆ ಮುಂದುವರಿಯುತ್ತಿರುವ ಅಧ್ಯಯನಗಳು

1. **ಕೊಡಗು ಜಿಲ್ಲೆಯಲ್ಲಿ ಜನಸಂಖ್ಯಾ ಬದಲಾವಣೆಯ ಬಗ್ಗೆ ಒಂದು ಅಧ್ಯಯನ**

   1981-91ರಲ್ಲಿ ಕರ್ನಾಟಕ ರಾಜ್ಯದ ಕೊಡುಗು ಜಿಲ್ಲೆಯಲ್ಲಿ ಕಡಿಮೆ ಜನಸಂಖ್ಯಾ ಬೆಳವಣಿಗೆಯ ಪ್ರಮಾಣವು ಶೇಕಡಾ 5.75ರಷ್ಟು ದಾಖಲೆಯಾಗಿ ಲಿಂಗ ಪ್ರಮಾಣವು (1000 ಗಂಡಸರಿಗೆ ಇರಬಹುದಾದ ಹೆಂಗಸರು ಪ್ರಮಾಣವು) 1981ರಲ್ಲಿ 933ರಿಂದ 1991ರಲ್ಲಿ 989ರಷ್ಟು ಪ್ರಗತಿಯನ್ನು ತೋರಿಸಿದೆ. ಇಂತಹ ಕಡಿಮೆ ಪ್ರಮಾಣದ ಜನಸಂಖ್ಯಾ ಬೆಳವಣಿಗೆಗೆ ಕಾರಣಗಳನ್ನು ಅರಿಯಲು ಬೆಂಗಳೂರಿನಲ್ಲಿರುವ ಜನಸಂಖ್ಯಾ ಕೇಂದ್ರವು ಕುಟುಂಬದ ಸಮೀಕ್ಷೆಯೊಂದನ್ನು ಕೊಡಗು ಜಿಲ್ಲೆಯಲ್ಲಿ ಕೈಗೊಂಡಿತು. ಈ ಸಮೀಕ್ಷೆಯು ವಲಸೆ ಹೋಗುವಿಕೆಯ ಪ್ರಮಾಣವನ್ನು ಅಂದಾಜಿಸಿ, ಫಲವತ್ತತೆ ಮತ್ತು ಮರಣದ ಬಗ್ಗೆ ಇರುವ ಮಟ್ಟವನ್ನು ಅರಿಯಲು ಮತ್ತು ಕುಟುಂಬ ಯೋಜನಾ ವಿಧಾನಗಳಿಂದ ಸಂರಕ್ಷಿಸಲ್ಪಟ್ಟ ದಂಪತಿಗಳ ಪ್ರಮಾಣವನ್ನು ಅಂದಾಜಿಸಲು ರಚಿಸಲಾಗಿದೆ. ಜಿಲ್ಲೆಯಲ್ಲಿನ ನಗರ, ಗ್ರಾಮಾಂತರ ಹಾಗೂ ಪ್ಲಾಂಟೇಶನ್ ಪ್ರದೇಶದಲ್ಲಿರುವ ಸುಮಾರು 3000 ಕುಟುಂಬಗಳನ್ನು ಮಾದರಿಗಾಗಿ ಆಯ್ಕೆ ಮಾಡಲಾಗಿದೆ.

   ಪ್ರತಿ 1000 ಜನಸಂಖ್ಯೆಗೆ ಇರುವ ಕಚ್ಚಾ ಜನನ ಹಾಗೂ ಮರಣಗಳ ಪ್ರಮಾಣವು 23.2 ಮತ್ತು 7.2 ಪರಸ್ಪರ ಕಂಡುಬಂದಿತು. 1981-91ರಲ್ಲಿ ವಲಸೆ ಬರುವವರ ಪ್ರಮಾಣವು 4.69 ಶೇ. ಹಾಗೂ ವಲಸೆ ಹೋಗುವವರ ಪ್ರಮಾಣವು 14.99 ಶೇ. ಇತ್ತು. ಹೀಗೆ ನಿವ್ವಳ ವಲಸೆಯು ಶೇಕಡಾ 10.3 ಇತ್ತು. ಹೀಗೆ ಅಂದಾಜಿಸಿದ ಶೇಕಡಾ 10.3 ನಿವ್ವಳ ವಲಸೆಯಿಂದ ದಶಕದ ಬೆಳವಣಿಗೆಯು 6.0ರಷ್ಟು ಇದೆ. ಈ ಪ್ರಮಾಣವು ಜನಗಣತಿಯ ಅಂದಾಜಿನ 5.75ರಷ್ಟಕ್ಕೆ ಬಹಳ ಹತ್ತಿರವಾಗಿದೆ. ಗಂಡಸರು ವಲಸೆ ಹೋಗುವುದರ ಮುಖ್ಯ ಕಾರಣವು ಉದ್ಯೋಗಕ್ಕೆ ಸಂಬಂಧಿಸುವುದಾಗಿಯೂ ಮತ್ತು ಹೆಂಗಸರು ವಲಸೆ ಹೋಗುವಿಕೆಯು ಮದುವೆಗೆ ಸಂಬಂಧಿಸಿದ ಕಾರಣದಿಂದಾಗಿ ಕಂಡು ಬಂದಿದೆ.

ಈ ಅಧ್ಯಯನವನ್ನಾಧರಿಸಿದ ಒಂದು ಕಡರು ವರದಿಯು ಸಿದ್ಧಗೊಳಿಸಲ್ಪಟ್ಟಿದೆ.

2. **ಕರ್ನಾಟಕದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ (ಪ್ರಾ. ಆ.ಕೇ) ದ ಮಟ್ಟದಲ್ಲಿ ಕುಟುಂಬ ಯೋಜನಾ ಸೇವೆಗಳ ಗುಣ ಮಟ್ಟದ ಬಗ್ಗೆ ಒಂದು ಮೌಲ್ಯಮಾಪನ**

ಈ ಅಧ್ಯಯನದಲ್ಲಿ ಕರ್ನಾಟಕದಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ನೀಡಲಾಗುವ ಕುಟುಂಬ ಯೋಜನಾ ಸೇವೆಗಳ ಗುಣಮಟ್ಟವನ್ನು ಅಂದಾಜು ಮಾಡಲಾಗಿದೆ. ಈ ಅಧ್ಯಯನವು ಪ್ರಾ.ಆ.ಕೇಂದ್ರಗಳಲ್ಲಿ ಲಭ್ಯವಾಗುವ ಅಂತರ ರಚನಾ

ಸೌಲಭ್ಯಗಳಾದ ಶಸ್ತ್ರಕ್ರಿಯಾ ಕೊಠಡಿ, ಪ್ರಸವಕೋಣೆ ಇತ್ಯಾದಿ ಮತ್ತು ಇನ್ನಿತರ ಸೌಲಭ್ಯಗಳಾದ ತರಬೇತಿ ಪಡೆದ ಮಾನವ ಶಕ್ತಿ, ಪೂರೈಕೆಗಳು, ಸಾರಿಗೆ ಇತ್ಯಾದಿಗಳನ್ನು ಮತ್ತು ಉಪ-ಕೇಂದ್ರಗಳಲ್ಲಿ ಸಿಗುವ ಸೌಲಭ್ಯಗಳು, ಆರೋಗ್ಯ ಕಾರ್ಯಕರ್ತರುಗಳಿಂದ ನೀಡಲಾಗುವ ತಾಯಿ ಮಕ್ಕಳ ಆರೋಗ್ಯ ಮತ್ತು ಕುಟುಂಬ ಯೋಜನಾ ಸೇವೆಗಳ ಹಾಗೂ ಸಂತಾನ ಹರಣ ಶಸ್ತ್ರಕ್ರಿಯೆಯ ಶಿಬಿರಗಳ ಗುಣಮಟ್ಟವನ್ನು ಅಂದಾಜಿಸಲು ಕೇಂದ್ರೀಕೃತವಾಗಿದೆ.

ಈ ಅಧ್ಯಯನದ ವಿಶ್ಲೇಷಣೆಯನ್ನು ವಿಭಾಗದ ಮಟ್ಟದಲ್ಲಿ ಮಾಡಲಾಗುವುದು. ಏಕೆಂದರೆ ಕುಟುಂಬ ಯೋಜನಾ ಸೇವೆಗಳನ್ನು ನೀಡುವಲ್ಲಿ ಅವುಗಳ ಗುಣ ಮಟ್ಟದಲ್ಲಿ ಪರಸ್ಪರ ಆಯಾಯಾ ವಿಭಾಗಗಳ ಮಟ್ಟದಲ್ಲೇನಾದರೂ ವ್ಯತ್ಯಾಸಗಳೇನಾದರೂ ಕಂಡು ಬರುವುದೋ ಎಂಬುದನ್ನು ತಿಳಿಯಲುದ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯದಲ್ಲಿ ವ್ಯಾಪಕವಾಗಿರುವ ನಾಲ್ಕು ವಿಭಾಗಗಳಿಂದಲೂ ಅಧ್ಯಯನದ ಮಾದರಿಯನ್ನು 12 ಪ್ರಾ.ಆ. ಕೇಂದ್ರಗಳು, 24 ಉಪ-ಕೇಂದ್ರಗಳು ಮತ್ತು 24 ಗ್ರಾಮಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗುವುದು. ಕುಟುಂಬ ಯೋಜನೆಯ ಸೌಲಭ್ಯಗಳನ್ನು ಪಡೆದಿರುವ ಸುಮಾರು 1500 ಮಂದಿ ಫಲಾನುಭವಿಗಳನ್ನು ಸಂದರ್ಶಿಸಲಾಗುವುದು. ಒಟ್ಟಾರೆ 24 ಕುಟುಂಬ ಯೋಜನಾ ಶಸ್ತ್ರಕ್ರಿಯಾ ಶಿಬಿರ (ಸಂತಾನ ಹರಣ) ಗಳನ್ನು ವೀಕ್ಷಿಸಲಾಗುವುದು. ಶಸ್ತ್ರ ಚಿಕಿತ್ಸೆಯನ್ನು ಹೊಂದಿದವರಲ್ಲಿ ಸುಮಾರು 240 ಫಲಾನುಭವಿಗಳನ್ನೂ ಸಹ ವೀಕ್ಷಿಸಲಾಗುವುದು. ತತ್ಸಂಬಂಧವಾದ ಕ್ಷೇತ್ರ ಕಾರ್ಯಾಚರಣೆಯು ಮುಂದುವರೆದಿದೆ.

**(3) ಕರ್ನಾಟಕದಲ್ಲಿನ ನವ ವಿವಾಹಿತರಲ್ಲಿ ಕುಟುಂಬ ಯೋಜನಾ ವಿಧಾನಗಳ ಅನುಷ್ಠಾನದ ಬಗ್ಗೆ ಇರತಕ್ಕ ಜ್ಞಾನಮನೋಭಾವ ಮತ್ತು ಆಚರಣೆಯ ಬಗ್ಗೆ ಒಂದು ಅಧ್ಯಯನ**

ನವ ವಿವಾಹಿತ ದಂಪತಿಗಳಲ್ಲಿ ಕುಟುಂಬ ಯೋಜನಾ ವಿಧಾನಗಳ ಬಗ್ಗೆ ಇರಬಹುದಾದ ಜ್ಞಾನ-ಮನೋಭಾವ ಮತ್ತು ಆಚರಣೆಯ ಬಗ್ಗೆ ಪರೀಕ್ಷಿಸುವ ಸಲುವಾಗಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ ಹಾಗೂ ಅವರಲ್ಲಿ ಎಷ್ಟರ ಮಟ್ಟಿಗೆ ಗರ್ಭ ನಿರೋಧಕಗಳು ಬಳಸಲ್ಪಟ್ಟಿದೆ ಎಂಬುದನ್ನು ತಿಳಿಯಲುದ್ದೇಶಿಲಾಗಿದೆ. ಸುಮಾರು 700 ಮಂದಿ ನವ ವಿವಾಹಿತ ದಂಪತಿಗಳನ್ನು ಅಧ್ಯಯನಕ್ಕಾಗಿ ಕೋಲಾರ, ಹಾಸನ, ಬಳ್ಳಾರಿ ಮತ್ತು ಧಾರವಾಡ ಜಿಲ್ಲೆಗಳಿಂದ ಮಾದರಿಗಾಗಿ ಆಯ್ಕೆಮಾಡಲಾಗಿದ್ದು ಅವರುಗಳನ್ನು ಸಂದರ್ಶಿಸಲಾಗಿದೆ. ತತ್ಸಂಬಂಧವಾದ ಕರಡು ವರದಿಯು ತಯಾರಿಕೆಯಲ್ಲಿದೆ.

**(4) ಮಹಿಳೆಯರಲ್ಲಿ ಗರ್ಭಪಾತಮಾಡಿಸಿಕೊಳ್ಳುವ ವರ್ತನೆಗೆ ಸಂಬಂಧಿಸಿದ ಮಾನಸಿಕ ಅಂಶಗಳು – ಒಂದು ಅಧ್ಯಯನ**

ಈ ಅಧ್ಯಯನದಲ್ಲಿ ಮಹಿಳೆಯರಲ್ಲಿ ಗರ್ಭಪಾತವನ್ನು ಅಪೇಕ್ಷಿಸುವ ವರ್ತನೆಗೆ ಸಂಬಂಧಿಸಿರುವ ಮಾನಸಿಕ ಅಂಶಗಳ ಬಗ್ಗೆ ಪರೀಕ್ಷಿಸಲಾಗಿದೆ. ಮಾದರಿಗಾಗಿ 92 ಮಂದಿ ಮಹಿಳೆಯರು ಬೆಂಗಳೂರಿನ ಸರ್ಕಾರೀ ಆಸ್ಪತ್ರೆಗಳಲ್ಲಿ ಸೇವೆಯನ್ನು ಪಡೆದವರು ಹಾಗೂ

ಬೆಂಗಳೂರಿನಲ್ಲಿರುವ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಸೇವೆ ಪಡೆದವರಲ್ಲಿ 68 ಮಂದಿ ಮಹಿಳೆಯರನ್ನು 1992ರ ಅಕ್ಟೋಬರ್‌ನಿಂದ 1993ರ ವರೆಗೆ ಗರ್ಭಪಾತ ಮಾಡಿಸಿಕೊಂಡವರ ಗುಂಪಿನಿಂದ ಆಯ್ಕೆಮಾಡಿ ಸಂದರ್ಶಿಸಲಾಗಿದೆ. ಮಾಹಿತಿಯ ವಿಶ್ಲೇಷಣೆಯು ಮುಂದುವರಿದಿದೆ.

**(5) ಮಕ್ಕಳ ಹುಟ್ಟು ತೂಕದ ಬಗ್ಗೆ ಪ್ರಭಾವ ಬೀರುವ ಅಂಶಗಳ ಅಧ್ಯಯನ**

ಭಾರತದಲ್ಲಿ, ಜೀವಂತ ಜನನಗಳಲ್ಲಿ ಸುಮಾರು ಶೇಕಡಾ 30ರಷ್ಟು ಜನನಗಳಲ್ಲಿ ಕಡಿಮೆ ಹುಟ್ಟುತೂಕ ಇರುವ (2500 ಗ್ರಾಂ ಗಳಿಗಿಂತಾ ಕಡಿಮೆ) ಶಿಶುಗಳು ಜನಿಸುವರು. ಕಡಿಮೆ ಹುಟ್ಟು ತೂಕದಿಂದಾಗಿ ಹುಟ್ಟುವ ಶಿಶುಗಳು ಶಾರೀರಿಕವಾಗಿಯೂ ಮತ್ತು ಮಾನಸಿಕವಾಗಿಯೂ ದೌರ್ಬಲ್ಯವುಳ್ಳವರಾಗುವರೆಂಬುದಾಗಿ ಹೇಳಲಾಗಿದೆ. ಆದ್ದರಿಂದ, ಮಕ್ಕಳಲ್ಲಿ ತೂಕದ ಬಗ್ಗೆ ಪ್ರಭಾವ ಬೀರುವಂತಹ ಅಂಶಗಳನ್ನು ಅಧ್ಯಯನ ಮಾಡುವ ಅಗತ್ಯವಿದೆ. ಈ ಪ್ರಸ್ತುತ ಅಧ್ಯಯನವು ತಾಯಿಯರಿಗೆ ಸಂಬಂಧಿಸಿದ ಅಂಶಗಳಾದ ಆರೋಗ್ಯ ಮತ್ತು ಪೋಷಣೆಯ ಮಟ್ಟ, ಮತ್ತು ಸಾಮಾಜಿಕ ಆರ್ಥಿಕ ಹಾಗೂ ಜನಾಂಗ ಸ್ಥಿತಿಯ ಅಂಶಗಳ ಬಗ್ಗೆ ಕೇಂದ್ರೀಕರಿಸಲಾಗಿದೆ. ಈ ಅಧ್ಯಯನವು ಬೆಂಗಳೂರಿನಲ್ಲಿರುವ ಕೆ.ಸಿ. ಜನರಲ್ ಆಸ್ಪತ್ರೆಯಲ್ಲಿ ಸಂಭವಿಸಲಾದ ಜನನಗಳು - 1993 ಜುಲೈ ಆಗಸ್ಟ್ ಸೆಪ್ಟೆಂಬರ್ ತಿಂಗಳುಗಳಲ್ಲಾದ ಜನನಗಳನ್ನಾಧರಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಸುಮಾರು 500 ಜನನಗಳ ಬಗ್ಗೆ ಹುಟ್ಟು ತೂಕ ಇತ್ಯಾದಿಗಳ ಮಾಹಿತಿಗಳನ್ನು ಸಂಗ್ರಹಿಸಲಾಯಿತು. ಈ ಸಂಬಂಧವಾಗಿ, ಆಸ್ಪತ್ರೆಗಳಲ್ಲಿ ತಾಯಂದಿರನ್ನು ಸಂದರ್ಶಿಸಿ ಅವರುಗಳ ಎತ್ತರ ಮತ್ತು ತೂಕಗಳನ್ನು ಅಳೆಯಲಾಯಿತು.

ಈ ಅಧ್ಯಯನದ ಮಾಹಿತಿಯ ತಖ್ತೆಯು ಸಂಪೂರ್ಣವಾಗಿ, ಒಂದು ಕರಡು ವರದಿಯು ತಯಾರಾಗುತ್ತಿದೆ.

**(6) ಫಲವತ್ತತೆ ಮತ್ತು ಮದುವೆಯ ಫಲಕಾರಿಯಾಗುವ ವಯಸ್ಸು : ಉತ್ತರ ಕರ್ನಾಟಕದಲ್ಲಿನ ಮಾಹಿತಿಗಳ ವಿಶ್ಲೇಷಣೆ**

ಮಹಿಳೆಯರಲ್ಲಿ ಮದುವೆ ವಯಸ್ಸಿನಲ್ಲಿ ನಿಧಾನವಾಗುವಿಕೆಯು ಗರ್ಭಧಾರಣೆ ಸಂಭವಿಸುವ ಜೀವನದ ಅವಧಿಯನ್ನು ತಗ್ಗಿಸುವುದು, ಇದನ್ನು ಗಮನದಲ್ಲಿರಿಸಿಕೊಂಡು, ತಜ್ಞರು ಈ ಕ್ಷೇತ್ರದಲ್ಲಿ ಕಾಲ ಕಾಲಕ್ಕೆ ಮದುವೆಯ ವಯಸ್ಸಿನ ಏರಿಕೆಯ ಬಗ್ಗೆ ಪ್ರತಿಪಾದಿಸುತ್ತಲೇ ಬಂದಿದ್ದಾರೆ. ಆದಾಗ್ಯೂ, ಈ ವಿಚಾರವು ಸದಾಕಾಲ ನಿಜವೆನಿಸದು, ಮುಖ್ಯವಾಗಿ ಕರ್ನಾಟಕದಲ್ಲಿ ದಂಪತಿಗಳ ಸುರಕ್ಷತೆಯ ದರವು ಸುಮಾರು ಶೇ. 50 ರಷ್ಟಿರುವಾಗ, ಅಂದರೆ, ಯಾವಾಗ ಅಧಿಕವಾದ ಗರ್ಭನಿರೋಧಕಗಳ ಬಳಕೆ ಇರುವುದೋ ಆವಾಗ ಸಮಾಜದಲ್ಲಿ ಬೇಗ ಇಲ್ಲವೇ ನಿಧಾನವಾಗಿ ಮದುವೆಯಾಗುವಿಕೆಯು ಫಲವತ್ತತೆಯ ಮೇಲೆ ಅಷ್ಟೇನೂ ಪ್ರಭಾವ ಬೀರದು. ಈ ಮೇಲ್ಕಂಡ ಅಂಶವನ್ನು ಕಂಡುಹಿಡಿಯುವ ಸಲುವಾಗಿ, ದ್ವಿತೀಯ ಬಗೆಯ ಲಭ್ಯವಿರುವ ಮಾಹಿತಿಗಳನ್ನಾಧರಿಸಿ ಒಂದು ಅಧ್ಯಯನವನ್ನು ಆರಂಭಿಸಲಾಗಿದೆ. ಅಗತ್ಯವಾದ ಮಾಹತಿಯನ್ನು 1992ರಲ್ಲಿ ಜನಕೇಂದ್ರದ ವತಿಯಿಂದ

ಕರ್ನಾಟಕ ರಾಜ್ಯದಲ್ಲಿನ 6 ಜಿಲ್ಲೆಗಳಾದ ಬೆಳಗಾಂ, ಬಿಜಾಪುರ, ಧಾರವಾಡ, ಬೀದರ್ ಮತ್ತು ಗುಲ್ಬರ್ಗ, ರಾಯಚೂರುಗಳಲ್ಲಿ ನಡೆಸಿದ ಸಮೀಕ್ಷೆಯಿಂದ ಆರಿಸಲಾಯಿತು.

ಮಾಹಿತಿಯ ವಿಶ್ಲೇಷಣೆಯ ತಖ್ತೆಗಳು ಪೂರ್ಣಗೊಂಡಿದ್ದು ಒಂದು ಕರಡು ವರದಿಯು ಶೀಘ್ರದಲ್ಲೇ ಹೊರಬರಲಿದೆ.

**(7) ಕರ್ನಾಟಕದಲ್ಲಿ ಕುಟುಂಬ ಯೋಜನಾ ಕಾರ್ಯಕ್ರಮದ ಮೌಲ್ಯ ಮಾಪನ**

ಈ ಅಧ್ಯಯನದ ಮುಖ್ಯೋದ್ದೇಶವು ಹೀಗಿದೆ.

(1) ಕರ್ನಾಟಕದ ವಿವಿಧ ವಿಭಾಗಗಳಲ್ಲಿನ ಕುಟುಂಬ ಯೋಜನಾ ಕಾರ್ಯಗತಿಯನ್ನು ಕಾಲಕ್ರಮೇಣ ವಿವಿಧ ಕುಟುಂಬ ಯೋಜನಾ ಪದ್ಧತಿಗಳಿಗನುಸಾರವಾಗಿ ವಿಶ್ಲೇಷಣೆ ಮಾಡುವುದು.

(2) ಕಾರ್ಯಕ್ರಮದ ಪ್ರಭಾವವು ಫಲವತ್ತತೆಯ ಮೇಲೆ ಹೇಗೆ ಬೀರಿದೆ ಎಂಬ ಅಂಶವನ್ನು ತುಲನೆಮಾಡುವುದು.

(3) ಪ್ರತಿ ಒಂದು ಹುಟ್ಟನ್ನು ತಡೆಗಟ್ಟಿದಾಗ ಸಂಭವಿಸುವ ವೆಚ್ಚವನ್ನು ಅಂದಾಜು ಮಾಡುವುದು.

(4) ಕುಟುಂಬ ಯೋಜನಾ ವಿಧಾನಗಳನ್ನು ಅಂಗೀಕರಿಸುವವರಲ್ಲುಂಟಾಗುವ ಬದಲಾವಣೆಗಳನ್ನು ವಿಶ್ಲೇಷಿಸುವುದು ಮತ್ತು,

(5) ಕುಟುಂಬ ಯೋಜನಾ ಕಾರ್ಯಗತಿಯ ಮೇಲೆ ಕೆಲವು ಅಂಶಗಳ ಪ್ರಭಾವ ಬೀರುವಿಕೆಯನ್ನು ಅಧ್ಯಯನ ಮಾಡುವುದು.

ತತ್ಸಂಬಂಧವಾದ ಮಾಹಿತಿಯ ಸಂಗ್ರಹವು ಮುಗಿದಿದ್ದು ವಿಶ್ಲೇಷಣಾ ಕಾರ್ಯವು ಆರಂಭವಾಗಿದೆ.

**(8) ಕರ್ನಾಟಕ ಸರ್ಕಾರದ ನೌಕರರಲ್ಲಿ ಫಲವತ್ತತೆ, ಮರಣ ಹಾಗೂ ಕುಟುಂಬ ಯೋಜನಾ ವಿಧಾನಗಳ ಆಚರಣೆ**

ಜನಸಂಖ್ಯಾ ಸಮಸ್ಯೆಯನ್ನು ನಿವಾರಿಸುವಲ್ಲಿ ಜನಾಂಗದ ವಿವಿಧ ತುಣುಕುಗಳ ಅಧ್ಯಯನ ಹಲವಾರು ಉಪಯುಕ್ತ ಸುಳಿವುಗಳನ್ನು ನೀಡಬಹುದು. ಈ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ನೌಕರರಲ್ಲಿನ ಫಲವತ್ತತೆ, ಮರಣ ಮತ್ತು ಕುಟುಂಬ ಯೋಜನಾ ವಿಧಾನಗಳ ಆಚರಣೆಯ ಬಗ್ಗೆ ಈ ಅಧ್ಯಯನವನ್ನು ಆರಂಭಿಸಲಾಗಿದೆ. ಈ ಸರ್ಕಾರೀ ನೌಕರರು ಜನಾಂಗದ ಪೂರ್ಣ ಪ್ರಾತಿನಿಧ್ಯವನ್ನು ತೋರದಿದ್ದರೂ ಕೂಡ ಸಾಮಾಜಿಕ ಹಾಗೂ ಆರ್ಥಿಕವಾದ ವಿವಿಧ ಮಟ್ಟಗಳಲ್ಲಿರತಕ್ಕಂತಹ ನೌಕರರಿಂದ ಮಾಹಿತಿಯ ವಿಶ್ಲೇಷಣೆಯು ಮೌಲ್ಯವುಳ್ಳ ಒಂದು ಒಳದೃಷ್ಟಿಯನ್ನು ನೀಡಬಹುದು. ಕರ್ನಾಟಕ ಸರ್ಕಾರೀ ನೌಕರರಲ್ಲಿ ಎ.ಬಿ.ಸಿ. ಮತ್ತು ಡಿ ಎಂಬುದಾಗಿ ನಾಲ್ಕುವರ್ಗಗಳಿವೆ. ಎ ಮತ್ತು ಬಿ ವರ್ಗಗಳು ಅಧಿಕಾರಿಗಳ ಮಟ್ಟದಲ್ಲಿರುವುದರಿಂದ, ಎ ಮತ್ತು ಬಿ ವರ್ಗಗಳನ್ನು ಒಟ್ಟುಗೂಡಿಸಿ ಅಧ್ಯಯನ ಮಾಡಲು ಉದ್ದೇಶಿಸಲಾಯಿತು. ಈ ಅಧ್ಯಯನಕ್ಕಾಗಿ ಒಟ್ಟಿನಲ್ಲಿ 1500

ನೌಕರರನ್ನು ಆಯ್ಕೆ ಮಾಡಲಾಯಿತು. ಈ ಸಂಬಂಧದ ಕ್ಷೇತ್ರ ಕಾರ್ಯವನ್ನು 1993ರ ಜೂನ್ ಮತ್ತು ಜುಲೈ ತಿಂಗಳಿನಲ್ಲಿ ಮಾಡಲಾಯಿತು.

ಮಾಹಿತಿಯ ತಖ್ತೆ ಕಾರ್ಯವು ಮುಗಿದಿದ್ದು ಕರಡು ವರದಿಯು ತಯಾರಾಗುತ್ತಿದೆ.

**(9) ವ್ಯಾಸೆಕ್ಟಮಿ (ಪುರುಷರ ಸಂತಾನಹರಣ ಶಸ್ತ್ರಕ್ರಿಯೆ)ಯ ಬೇಡಿಕೆಯ ಇಳಿಮುಖಕ್ಕೆ ಕಾರಣಗಳು : ಒಂದು ಅಧ್ಯಯನ**

ಕುಟುಂಬ ಯೋಜನಾ ವಿಧಾನಗಳಲ್ಲಿ ತಾತ್ಕಾಲಿಕ ಹಾಗೂ ಶಾಶ್ವತವಾದ ವಿಧಾನಗಳ ಸೇವೆಯು ಲಭ್ಯವಿದ್ದರೂ, ಬೇಡಿಕೆಯು ಮಾತ್ರ ಶಾಶ್ವತವಾದ ವಿಧಾನ (ಸಂತಾನ ಹರಣ ಶಸ್ತ್ರ ಕ್ರಿಯೆ)ದ ಬಗ್ಗೆಯೇ ಇದೆ. ಈ ಸಂಗತಿಯು ಕರ್ನಾಟಕ ರಾಜ್ಯದಲ್ಲಿರುವಂತೆಯೇ, ದೇಶಕ್ಕೂ ಅನ್ವಯಿಸುತ್ತದೆ.

ಕಾಲಕ್ರಮೇಣ, ಗಂಡಸರ ಶಸ್ತ್ರಕ್ರಿಯೆಯಿಂದ ಹೆಂಗಸರ ಶಸ್ತ್ರಕ್ರಿಯೆ ಯತ್ತ ಬೇಡಿಕೆಯು ಬದಲಾಗಿದೆ. ಕರ್ನಾಟಕದಲ್ಲಿ 1988ರಿಂದ 89ರ ವರೆಗೆ ನಡೆಸಿದ ಸಂತಾನಹರಣ ಶಸ್ತ್ರಕ್ರಿಯೆಗಳಲ್ಲಿ ಗಂಡಸರ ಸಂತಾನಹರಣ ಕ್ರಿಯೆಯು (ವ್ಯಾಸೆಕ್ಟಮಿ) ಶೇಕಡಾ 1 ಕ್ಕಿಂತಲೂ ಕಡಿಮೆ ಪ್ರಮಾಣದ್ದಾಗಿದೆ. ಗಂಡಸರೂ ಕೂಡಾ ವ್ಯಾಸೆಕ್ಟಮಿ ಮಾಡಿಸಿಕೊಳ್ಳಲು ಮುಂದೆ ಬರಬೇಕಾದ ಅಗತ್ಯವಿರುವುದು. ವ್ಯಾಸೆಕ್ಟಮಿ ಶಸ್ತ್ರಕ್ರಿಯೆಯನ್ನು ಅಳವಡಿಸುವಿಕೆಯನ್ನು ಉತ್ತೇಜಿಸಲು ಈ ಕೆಳಕಾಣಿಸಿದ ಉದ್ದೇಶಗಳನ್ನುಳ್ಳ ಅಧ್ಯಯನವೊಂದನ್ನು ಕೈಗೊಳ್ಳಲಾಗಿದೆ.

(1) ಸಂತಾನಹರಣ ಶಸ್ತ್ರಕ್ರಿಯೆಯಲ್ಲಿ ಪಾಲ್ಗೊಂಡವರ ಸಾಮಾಜಿಕ, ಆರ್ಥಿಕ ಮತ್ತು ಜನಸಂಖ್ಯೆಯ ವಿವಿಧ ರೂಪುರೇಷೆಗಳನ್ನು ಪರೀಕ್ಷಿಸಲು ಹಾಗೂ ಸಂಬಂಧಿಸಿದ ಕಾರ್ಯಕ್ರಮದ ಸಿಬ್ಬಂದಿ ವರ್ಗದವರನ್ನು ಅಭ್ಯಸಿಸಲು.

(2) ವ್ಯಾಸೆಕ್ಟಮಿಯ ಬೇಡಿಕೆಯು ಕಡಿಮೆಯಾಗಿರುವುದಕ್ಕೆ ಕಾರಣಗಳನ್ನು ಗುರ್ತಿಸಲು ಮತ್ತು

(3) ವ್ಯಾಸೆಕ್ಟಮಿಯ ಬೇಡಿಕೆಯು ಅಧಿಕವಾಗುವಂತೆ ಮಾಡಲು ಮಾರ್ಗೋಪಾಯಗಳನ್ನು ಸೂಚಿಸಲು.

ನಗರ ಮತ್ತು ಗ್ರಾಮಾಂತರ ಪ್ರದೇಶಗಳಿಂದ ಆಯ್ಕೆಯಾದ ಫಲಾನುಭವಿಗಳಲ್ಲಿ ಕೇವಲ 10 ಮಂದಿ ವ್ಯಾಸೆಕ್ಟಮಿ ಮಾಡಿಸಿಕೊಂಡವರನ್ನು ಮಾತ್ರ ಅಧ್ಯಯನಮಾಡಲು ಸಾಧ್ಯವಾಯಿತು. ಇದರೊಟ್ಟಿಗೆ ಹೋಲಿಸಿದಾಗ ಅಧ್ಯಯನಕ್ಕೆ 387 ಉದರದರ್ಶಕ ಚಿಕಿತ್ಸೆ ಪಡೆದವರೂ ಮತ್ತು 824 ಟ್ಯೂಬೆಕ್ಟಮಿ ಅಂಗೀಕರಿಸಿದವರೂ ನಗರ ಹಾಗೂ ಗ್ರಾಮಾಂತರ ಪ್ರದೇಶಗಳಿಂದ ಆಯ್ಕೆಯಾಗಿದ್ದರು.

ಈ ಸಂಬಂಧವಾದ ಕ್ಷೇತ್ರ ಕಾರ್ಯ ಹಾಗೂ ಮಾಹಿತಿಯ ತಖ್ತೆ ಕಾರ್ಯವು ಮುಗಿದಿದ್ದು ವರದಿಯು ಈ ವರ್ಷದಲ್ಲಿ ಸಂಪೂರ್ಣವಾಗುವ ನಿರೀಕ್ಷೆಯಿದೆ.

6) **1994-95ಕ್ಕೆ ಉದ್ದೇಶಿಸಲಾಗಿರುವ ಕಾರ್ಯಕ್ರಮಗಳು**

(1) ಸದ್ಯದಲ್ಲಿ ಕೈಗೊಂಡಿರುವ ಅಧ್ಯಯನಗಳು ಪೂರ್ಣಗೊಳ್ಳುವಿಕೆ.

ಈ ಹಿಂದೆ ತಿಳಿಸಲಾಗಿರುವ 9 ಅಧ್ಯಯನಗಳೂ 1994-95ರಲ್ಲಿ ಪೂರ್ಣಗೊಳ್ಳುವುದು.

(2) ಹೊಸದಾಗಿ ಕೈಗೊಳ್ಳಬೇಕಾಗಿರುವ ಅಧ್ಯಯನಗಳು

(1) ನೊರಾಡ್ ಯೋಜನೆಯನ್ವಯ ಬೆಳಗಾಂ ಮತ್ತು ಕೋಲಾರ ಜಿಲ್ಲೆಗಳಲ್ಲಿ ಕೈಗೊಳ್ಳಲಾಗುವ ಆಧಾರರೇಖೆಯ ಸಮೀಕ್ಷೆ ಮತ್ತು ಫಲವತ್ತತೆಯ ಸಮೀಕ್ಷೆ.

(2) ಭಾರತ ಜನಸಂಖ್ಯಾ ಯೋಜನೆ 9 ರನ್ವಯ ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಕೈಗೊಳ್ಳಲಾಗುವ ಆಧಾರ ರೇಖೆಯ ಸಮೀಕ್ಷೆ ಫಲಾನುಭವಿಗಳ ಅಗತ್ಯಗಳ ಅಂದಾಜು ಮಾಡುವಿಕೆ ಮತ್ತು ಸಂಪರ್ಕ ಅಗತ್ಯಗಳ ಅಂದಾಜು ಮಾಡುವಿಕೆ.

(3) ತಾಯಿಯ ವಯಸ್ಸು ಮತ್ತು ಮಗುವಿನ ಬುದ್ಧಿಮತ್ತೆ.



ಮುದ್ರಕರು :
ನಿರ್ದೇಶಕರು, ಮುದ್ರಣ, ಲೇಖನ ಸಾಮಗಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ, ಬೆಂಗಳೂರು

